ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# ಧರ್ಮ ಮತ್ತು ರಾಷ್ಟ್ರ

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥
—ಸಿದ್ಧಾಂತ ಶಿಖಾಮಣಿ

ಪ್ರಕಾಶಕರು :

ಮೆಹಕರ ಶ್ರೀಗುರು ಕಟ್ಟೀಮನಿ ಸಂಸ್ಥಾನ
ಹಿರೇಮಠದ ಚರಪಟ್ಟಾಧಿಪತಿ
॥ ಬ್ರ॥ ರಾಚೋಟಿ ಶಿವಾಚಾರ್ಯರು.



ಗ್ರಂಥಕರ್ತರು :

...ಮಿ ಹಿರೇಮಠ (ಬನಹಟ್ಟಿ)
...॥ ಗೋರಟಾ ಬಿ.
(ಕರ್ನಾಟಕ ರಾಜ್ಯ)

೧೯೬೯ ] [ ಬೆಲೆ ೧ ರೂ.

# ಧರ್ಮ ಮತ್ತು ಶಾಸ್ತ್ರ

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥

—ಸಿದ್ಧಾಂತ ಶಿಖಾಮಣಿ

ಪ್ರಕಾಶಕರು :

ಮೆಹಕರ ಶ್ರೀಗುರು ಕಟ್ಟೀಮನಿ ಸಂಸ್ಥಾನ
ಹಿರೇಮಠದ ಚರಪಟ್ಟಾಧಿಪತಿ
ಶ್ರೀ ಷ॥ ಬ್ರ॥ ರಾಚೋಟಿ ಶಿವಾಚಾರ್ಯರು.

ಗ್ರಂಥಕರ್ತರು :

ವೇ॥ ಸುರೇಶಸ್ವಾಮಿ ಹಿರೇಮಠ (ಬನಹಟ್ಟಿ)
ಮು॥ ಪೋ॥ ಗೋರಟಾ ಬಿ.
ಜಿ. ಬೀದರ (ಕರ್ನಾಟಕ ರಾಜ್ಯ)

೧೯೬೯ ] [ ಬೆಲೆ ೧ ರೂ.

ಪುಸ್ತಕ ದೊರೆಯುವ ಸ್ಥಳ:
ವೇ|| ರೇವಣಸಿದ್ಧಯ್ಯನವರು ಹಿರೇಮಠ
ಅಂಚೆ:— ಗೋರಟಾ (ಬಿ.)
ಮಾರ್ಗ:— ಬಸವಕಲ್ಯಾಣ ಜಿಲ್ಲಾ ಬೀದರ.



ಪ್ರಥಮ ಮುದ್ರಣ ೨೦೦೦ ಪ್ರತಿಗಳು.

ಮುದ್ರಕರು: ವ್ಹಿ. ಸಿ. ಹಡಗಲಿಮಠ, ಬಿ. ಎ.,
ಶಾರದಾ ಪ್ರಿಂಟಿಂಗ ಪ್ರೆಸ್
ಸರಾಫ ಬಜಾರ, ಗುಲಬರ್ಗಾ.



ಬೆಲೆ ೧ ರೂ.

೧೫ ಅಗಷ್ಟ, ೧೯೬೪

# ವಿಷಯಾನುಕ್ರಮಣಿಕೆ.

---

ಮುನ್ನುಡಿ

ವೈದಿಕ ರಾಷ್ಟ್ರಗೀತ

ಶ್ರದ್ಧಾಂಜಲಿ

ಸಮರ್ಪಣ

ಆಶೀರ್ವಾದ

ಅಗ್ರವಚನ

ವಿಜ್ಞಾಪನೆ

ಧರ್ಮ ಮತ್ತು ರಾಷ್ಟ್ರ

೧. ಸಂಘಮಯ ಜೀವನ .... ....

೨. ಧರ್ಮ ಸಂಸ್ಕಾರದ ಸಾಂಘಿಕ ಜೀವನ .... ೩

೩. ಮಾನವತೆಯ ಚತುಃಸೀಮೆಗಳು .... .... ೧೦

೪. ರಾಜಕಾರಣದ ಚತುಃಸೀಮೆಗಳು .... .... ೧೨

೫. ನ್ಯಾಯಸಂಘದಉಪಕ್ರಮ .... .... ೧೩

೬. ಸುಶಾಸನ ಪದ್ಧತಿ .... .... ೧೬
೭. ಧರ್ಮಾಂಕಿತ ರಾಷ್ಟ್ರ ... .... ೧೮
೮. ಪ್ರಾಚೀನ ಹಾಗೂ ಅರ್ವಾಚೀನ ಕಾಲದ ಮಾನವ .... ೧೯
೯. ರಾಷ್ಟ್ರದಲ್ಲಿಯ ಅನೈಸರ್ಗಿಕ ಪಾಪಕರ್ಮಗಳು .... ೨೨
೧೦. ಪ್ರಕೃತಿಯ ವಿಕೋಪ .... .... ೨೪
೧೧. ಪ್ರಜಾಪ್ರಭುತ್ವ ಮತದಾನ ಪದ್ಧತಿ .... .... ೩೦
೧೨. ಧರ್ಮದ ಉತ್ತರಾಂಗಗಳು .... .... ೪೦
೧೩. ಓಜ .... .... ೪೩
೧೪. ಮಾನವ ಧರ್ಮವು ಒಂದೇ .... .... ೪೪
೧೫. ಮತ ಪಂಥಗಳ ಕಲ್ಪನೆ ... .... ೫೦
೧೬. ರಾಷ್ಟ್ರದ ಯೋಗಕ್ಷೇಮ .... .... ೫೨
೧೭. ಭಾರತದ ಪ್ರಾಕೃತಿಕ ವೈಶಿಷ್ಟ್ಯ .... .... ೫೫

# ಮುನ್ನುಡಿ.

"It is true that a little philosophy inclineth man's mind to atheism. But depth in philosophy bringeth men's minds about to religion"—

"ಅಲ್ಪ ವಿಚಾರ ಮತಿಗೆ ಧರ್ಮವು ಸಂಶಯಗ್ರಸ್ತ ವಿಷಯವಾಗುತ್ತದೆ. ಪ್ರಜ್ಞೆಯುಳ್ಳ ಸುವಿಚಾರ ಪರರಿಗೆ ಮನಸ್ಸು ಧರ್ಮದೆಡೆಗೆ ಒಲಿಯುತ್ತದೆ." ಎಂಬ ಮಾತನ್ನು ಬೇಕನ್ (Bacon) ತತ್ವಜ್ಞಾನಿಯು ಹೇಳಿದ್ದಾನೆ. ಸುವಿಚಾರವಂತರ ಮನವು ಎಂತಹ ಧರ್ಮದೆಡೆಗೆ ಒಲಿಯುತ್ತದೆ? ಧರ್ಮವೆಂದರೇನು? ಧರ್ಮವು ರಾಷ್ಟ್ರದಲ್ಲಿರುವ ಜನಜೀವನದ ಮೇಲೆ ಎಂತಹ ಪ್ರಭಾವ ಬೀರುತ್ತದೆ? ರಾಷ್ಟ್ರಕ್ಕೂ ಧರ್ಮಕ್ಕೂ ಇರುವ ನಿಕಟ ಸಂಬಂಧವೇನು? ಎಂಬುದನ್ನು ಲೇಖಕರು ಚನ್ನಾಗಿ ವಿವರಿಸಿದ್ದಾರೆ.

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ॥

"ಸಿದ್ಧಾಂತ ಶಿಖಾಮಣಿ" ಯಲ್ಲಿ ಪ್ರಣಿತವಾದ ಈ ಮಹಾವಾಕ್ಯದ ಬಗ್ಗೆ ವಿಶದವಾಗಿ ವ್ಯಾಖ್ಯಾನ ಬರೆದಂತಿದೆ. ಈ ಲೇಖನ ವಿಷಯವು ಧರ್ಮಕ್ಕೆ ಸಂಬಂಧ ಪಟ್ಟಿದ್ದರೂ ಕೂಡ ರಾಷ್ಟ್ರದ ಸಂಬಂಧ ತೋರಿಸಿದ್ದು; ಇದು ಭಾರತೀಯ ತತ್ವಜ್ಞಾನದ ವಿಶಾಲತ್ವದ ಮಹತಿಯನ್ನು ವಿಶ್ವಕ್ಕೆ ತೋರುವಂತಹದಾಗಿದೆ. ರಾಜಕಾರಣದಲ್ಲಿ ಧರ್ಮದ ಕೆಲಸವೇನು? ಎನ್ನುವ ಕಾಲವಿದಾಗಿದೆ. ಆದ್ದರಿಂದ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವುಗಳಿಂದ ವಿಮುಖವಾದ ರಾಜಕಾರಣವೇ ಇರಲಿ ಅಥವಾ

ಮತ್ತಾವ ಕಾರ್ಯಕಾರಣವೇ ಇರಲಿ, ಅದು ಬಾಳಲಾರದು; ಬೆಳೆಯಲಾರದು; ಬದುಕಲಾರದು. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜಾ, ಜಪ ಮತ್ತು ಧ್ಯಾನ ಈ ಮೇಲೆ ಹೇಳಿದ ಧರ್ಮ ಸಂಗ್ರಹದಂತೆ ರಾಷ್ಟ್ರೀಯ ಜೀವನದಲ್ಲಿ ತಮ್ಮ ಜೀವನವನ್ನು ನಡಿಸಿ; ರಾಷ್ಟ್ರ ಮತ್ತು ಧರ್ಮ ಇವೆರಡಕ್ಕೂ ಅಭೇದ್ಯ ಸಂಬಂಧವಿದೆ ಎನ್ನುವದಕ್ಕೆ ಸಾಕಾರ ರೂಪವಾಗಿ ಬಾಳಿ ಬೆಳಗಿದ ಮಹಾತ್ಮಾ ಗಾಂಧೀಜಿಯವರ ಪ್ರತ್ಯಕ್ಷ ಜೀವನವೇ ಇದಕ್ಕೆ ನಿದರ್ಶನವಾಗಿದೆ. "ಸಿದ್ಧಾಂತ ಶಿಖಾಮಣಿ" ಯಲ್ಲಿ ಹೇಳಿದಂತಹ ಧರ್ಮಸಂಗ್ರಹವೇ ಮಹಾತ್ಮರು ನಡೆದು ತೋರಿಸಿದ್ದಾರೆ.

ಈ ಗ್ರಂಥವನ್ನು ರಚಿಸಿದ ಪೂಜ್ಯ ಸುರೇಶ ಸ್ವಾಮಿಗಳವರು (ಬನಹಟ್ಟಿ) ಹಿರೇಮಠ ಗೋರಟಾ ತ್ರಿಕಾಲ ಲಿಂಗ ಪೂಜಾನುಷ್ಠಾನ ತತ್ಪರರಾಗಿದ್ದು ಧರ್ಮ ಸಂಗ್ರಹದಂತೆ ನಡೆಯುವರಾದ್ದರಿಂದಲೇ ಈ ಗ್ರಂಥಕ್ಕೆ ಇನ್ನೂ ಹೆಚ್ಚಿನ ಶೋಭೆಯನ್ನು ತಂದು ಕೊಟ್ಟಿದ್ದಾರೆ. ಈ ಗ್ರಂಥ ರಚನೆ-ಯಲ್ಲಿ ಅತ್ಯಂತ ಸಹಾಯಕರಾಗಿದ್ದು ಅದರ ಸಾಹಿತ್ಯ ಸೌಂದರ್ಯವನ್ನು ವೃದ್ಧಿಗೊಳಿಸುವಲ್ಲಿ ಸಹಾಯಕರಾಗಿದ್ದವರೆಂದರೆ ಪೂಜ್ಯ ಶ್ರೀ ಷ. ಬ್ರ. ರಾಜೋಟಿ ಶಿವಾಚಾರ್ಯರು ಕಟ್ಟೀಮನಿ ಸಂಸ್ಥಾನ ಹಿರೇಮಠ ಮೊಹಕರ ಅವರೇ ಆಗಿರುವರು. ಈ ಕಾರ್ಯ ಸ್ತುತ್ಯವಾದುದು. ಈ ಗ್ರಂಥ ಪ್ರಕಾಶನೆಗೆ ಧನಸಹಾಯ ನೀಡಿದ ಶ್ರೀ ಸಿದ್ಧನಾಥ ಮಾಲೀ ಪಾಟೀಲ ಅರಣಕಲ್ಲ ಅವರು ಸ್ತುತ್ಯರು. ಈ ಗ್ರಂಥಕರ್ತರಿಂದ ಇನ್ನೂ ಇಂತಹ ಅನೇಕ ಗ್ರಂಥಗಳು ಬೆಳಕಿಗೆ ಬರಲೆಂಬುದೇ ನನ್ನ ಮಹದಾಶೆಯಾಗಿದೆ.

ಶರಣಬಸವಪ್ಪ ಅಪ್ಪಾ, ಎಂ. ಎ.
ಶ್ರೀ ಶರಣಬಸವೇಶ್ವರ ಸಂಸ್ಥಾನ
ಗುಲಬರ್ಗಾ.

ಶರಣನಗರ
೧೫-೮ ೬೯.



ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾ, ಎಂ. ಎ.,
ಶ್ರೀ ಶರಣಬಸವೇಶ್ವರ ಸಂಸ್ಥಾನ, ಗುಲಬರ್ಗಾ.



ಶ್ರೀ ಷ. ಬ್ರ. ರಾಚೋಟಿ ಶಿವಾಚಾರ್ಯರು
ಚರಪಟ್ಟಾಧಿಪತಿ ಕಟ್ಟೀಮನಿ ಸಂಸ್ಥಾನ ಹಿರೇಮಠ ಮೊಹಕರ

# ವೈದಿಕ ರಾಷ್ಟ್ರಗೀತ

ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮ ವರ್ಚಸೀ ಜಾಯತಾಂ ।
ಆ ರಾಷ್ಟ್ರೇ ರಾಜನ್ಯಃ ಶೂರ ಇಷವ್ಯೋಽತಿ ವ್ಯಾಧೀ ಮಹಾರಥೋ
ಜಾಯತಾಂ ।
ದೋಗ್ಧ್ರೀ ಧೇನುರ್ವೋಢಾ ನಡ್ವಾನಾಶುಃ ಸಪ್ತಿಃ ಪುರಂಧಿರ್ಯೋಷಾ
ಜಿಷ್ಣೂ ರಥೇಷ್ಠಾಃ ಸಭೇಯೋ ಯುವಾಸ್ಯ ಯಜಮಾನಸ್ಯ ವೀರೋ
ಜಾಯತಾಂ ।
ನಿಕಾಮೇನಿಕಾಮೇ ನಃ ಪರ್ಜನ್ಯೋ ವರ್ಷತು
ಫಲವತ್ಯೋ ನ ಓಷಧಯಃ ಪಚ್ಯಂತಾಂ
ಯೋಗ ಕ್ಷೇಮೋ ನಃ ಕಲ್ಪತಾಂ ॥

(ಯಜುರ್ವೇದ ಸಂ. ೨೨ । ೨೨)

## ಭಾವಾರ್ಥ

ರಾಷ್ಟ್ರದಲ್ಲಿಯ ಸಮಸ್ತ ಬ್ರಾಹ್ಮಣರು ಬ್ರಹ್ಮಜ್ಞರಾಗಿ ಬ್ರಹ್ಮ ತೇಜಸ್ಸಿನಿಂದ ಜನ್ಮಿಸಲಿ.

ರಾಷ್ಟ್ರದಲ್ಲಿಯ ಸಮಸ್ತ ಕ್ಷತ್ರಿಯ ಗಣರು ಶೂರ, ವೀರ, ಧನುರ್ಧರ ರೋಗಮುಕ್ತ, ಮಹಾರಥಿಗಳಾಗಿ ಜನ್ಮಿಸಲಿ.

ಭಾರವಹಿಸುವಲ್ಲಿ ಹಿಂಜರಿಯದಿರುವ ಕಾರ್ಯಕ್ಷಮತೆಯುಳ್ಳ ವೃಷಭಗಳು ಜನ್ಮಿಸಲಿ.

ದುರ್ಗಮ ಮಾರ್ಗವನ್ನು ಅತಿ ಶೀಘ್ರವಾಗಿ ಸಂಚರಿಸುವ ಅಶ್ವಗಳು ಜನ್ಮಿಸಲಿ.

ಪತಿಪುತ್ರರುಳ್ಳ ಶೋಭಾಮಯಿ ಸ್ತ್ರೀಯರು ಜನ್ಮಿಸಲಿ.

ವಿಜಯಶೀಲ ಮಹಾ ಪರಾಕ್ರಮಿ ವೀರ ಸಾರಥಿಗಳು ಜನ್ಮಿಸಲಿ.
ರಾಷ್ಟ್ರದ ಯಜಮಾನನಾದ ರಾಜನ ಉದರದಲ್ಲಿ ಸಭಾವೀರ ತರುಣ-ಪುತ್ರನು ಜನ್ಮಿಸಲಿ.
ಅತಿವೃಷ್ಟಿ, ಅನಾವೃಷ್ಟಿ, ವಿಷವೃಷ್ಟಿ, ಅಕಾಲವೃಷ್ಟಿಯಾಗದೇ ಸಮ-ಯ ಸಮಯಕ್ಕೆ ಆವಶ್ಯಕತಾನುಸಾರವಾಗಿ ಅಮೃತಮಯ ಸುವೃಷ್ಟಿ-ಯಾಗಲಿ.
ಯಮಗಾಗಿ ಫಲಮೂಲಾದಿ ಅನ್ನೌಷಧಿಗಳು ಪರಿಪಕ್ವವಾಗಿರಿಸು. ರಾಜಾ-ಪ್ರಜಾ, ಪಿತಾ-ಪುತ್ರ, ಪತಿ-ಪತ್ನಿ, ಮಿತ್ರ-ಮಿತ್ರ, ಬಂಧು-ಬಂಧು ಭಗಿನಿ, ಸ್ವಾಮಿ-ಸೇವಕ, ಗುರು-ಶಿಷ್ಯಾದಿ ಸಕಲರು ಪರಸ್ಪರ, ಪ್ರೇಮದ ವಿಯೋಗಗೊಳ್ಳದೇ, ಅನ್ನ, ವಸ್ತ್ರ, ಧನ ಕನಕಾದಿ ದಾರಿದ್ರ್ಯ ದುಃಖಗಳಿಂದ ಪೀಡಿತರಾಗದೆ ಸಕಲೈಶ್ವರ್ಯಗಳ ಮೂಲಕ ನಮ್ಮಗಳ ಯೋಗ ಕ್ಷೇಮವನ್ನು ನಿರಂತರವಾಗಿ ರಾಷ್ಟ್ರ ದೇವತೆಯಿಂದ ಕಲ್ಪಿ-ಸಲ್ಪಡಲಿ.

## ವೈದಿಕ ರಾಷ್ಟ್ರಗೀತ

ಸ್ವರ ಸಂಯೋಜಕರು: – ವೇ|| ವಿರೂಪಾಕ್ಷ ಸಿದ್ಧರಾಮಯ್ಯ ಮಠಪತ್ತಿ (ಸಂಗೀತ ಅಲಂಕಾರ) ಗೋರಟಾ

ರಾಗ–ಭೂಪಾಲಿ.

ಥಾಟ:— ಕಲ್ಯಾಣ ಜಾತಿ—ಔಡವ.
ಎಲ್ಲ ಸ್ವರ ಶುದ್ಧ ವಾದಿ—ಗ, ಸಂವಾದಿ—ಧ

ಆರೋಹ:— ಸಾ ರಿ ಗ ಪ ಧ ಸಾಂ
ಅವರೋಹ:— ಸಾಂ ಧ ಪ ಗ ರಿ ಸಾ
ಪಕ್ಕಡ:— ಗ ರಿ ಸಾ ಧ ಸಾ ರಿ ಗ

ಗ – – – ರಿ ಗ – – ಗ ರಿ ಗ – ಗ ಗ ರಿ ಸಾ
ಆ ઽ ઽ ઽ ಬ್ರಹ್ಮನ್ ઽ ಬ್ರಾಹ್ಮಣೋ ઽ ಬ್ರಹ್ಮ ವ ರ್ಚ
ರಿ – – – ಗ – ರಿ ಸಾ – – –
ಸೀ ઽ ઽ ઽ ಜಾ ઽ ಯ ತಾ ઽ ઽ ઽ ಮ್

ಪ – ಪ – ಪ – ಧ ಪ – ಗ – ಸಾ ಸಾ ರಿ ಪ ಗ – –
ಆ ઽ ರಾ ઽ ಷ್ಟ್ರೇ ઽ ઽ ઽ ઽ ರಾ ઽ ಜ ನ್ಯಃ ઽ ઽ ઽ ઽ ઽ
ರಿ – ರಿ ರಿ ರಿ ಸಾ ರಿ ರಿ ಸಾ – ರಿ –
ಶೂ ઽ ರ ಇ ಷ ವ್ಯೋ ઽ ಽ ವ್ಯಾ ઽ ಧೀ ઽ
ಸಾ ಸಾ ರಿ ಗ – ರಿ ಗ – ರಿ ಸಾ – – – –
ಮ ಹಾ ರ ಥೋ ઽ ઽ ಜಾ ઽ ಯ ತಾ ઽ ઽ ઽ ಮ್

ಸಾ ರಿ ಗ – – – ಧ – ಪ ಗ – ರಿ –
ದೋ ઽ ಗ್ಧ್ರೀ ઽ ઽ ઽ ಧೇ ઽ ನು ರ್ ವೋ ઽ ಢಾ ઽ
– – ಸಾ – ರಿ – ಗ – ರಿ ಸಾ – –
ઽ ઽ ನ ઽ ಡ್ವಾ ઽ ನಾ ઽ ಶುಃ ઽ ઽ ઽ
ಗ – ಪ – ಪ ಪ ಪ ಪ ಧ – ಧ – – –
ಸ ઽ ಪ್ತಿಃ ઽ ಪು ರಂ ಧಿ ರ ಯೋ ઽ ಷಾ ઽ ઽ ઽ
ಧ ಸಂ ಸಂ ಸಂ ರಿಂ – ಸಂ – ಧ ಸಂ ರಿಂ ಗಂ
ಜಿ ಷ್ಣೂ ರ ಥೇ ಷ್ಠಾಃ ઽ ઽ ઽ ಸ ಭೇ ಯೋ ઽ
ರಿಂ ಗಂ – ಗಂ ರಿಂ ಗ ರಿಂ ಸಂ ಸಂ ಧ ಸಂ –
ಯು ವಾ ઽ ಸ್ಯ ಯ ಜ ಮಾ ઽ ನ ઽ ಸ್ಯ ઽ
ಸಂ – ಸಂ ಧ ಪ ಗ ರಿ – ಗ – ರಿ ಸಾ – – – –
ವೀ ઽ ರೋ ઽ ઽ ઽ ઽ ઽ ઽ ಜಾ ઽ ಯ ತಾ ઽ ઽ ઽ ಂ
ರಿ ಗ ಗ – ರಿ ಗ ಗ – ರಿ ಗ ಗ – ಗ –
ನಿ ಕಾ ಮೇ ઽ ನಿ ಕಾ ಮೇ ઽ ನಃ ಪ ರ್ಜ ઽ ನ್ಯೋ ઽ

ರಿ – ಸಾ – – –
ವ ರ್ಷ ತು ಽ ಽ ಽ
ಸಾ ರಿ ಗ ಪ – ಪ ಪ – ಗ ಪ ಧ – ಧ –
ಫ ಲ ವ ತ್ಯೋ ಽ ನ ಓ ಽ ಷ ಧ ಯಃ ಽ ಽ ಽ
ಪ ಧ ಸಾ – – –
ಪ ಚ್ಯ ತಾ ಽ ಽ ಮ್
ಸಾ – ಸಾ ಧ ಪ ಗ ರಿ – – ಸಾ ಗ – ರಿ ಸಾ –
ಯೋ ಽ ಗ ಕ್ಷೇ ಽ ಮೋ ಽ ಽ ಽ ನಃ ಕ ಽ ಲ್ಪ ತಾ ಽ
– – –
ಽ ಽ ಮ್
–ಗ – – – ರಿ ಗ – ಗ ರಿ ಗ – ಗ ಗ ರಿ ಸಾ
ಆ ಽ ಽ ಽ ಬ್ರಹ್ಮನ್ ಽ ಬ್ರಾಹ್ಮಣೋ ಽ ಬ್ರಹ್ಮವರ್ಚ
ರಿ – – – ಗ – ರಿ ಸಾ – – – –
ಸೀ ಽ ಽ ಽ ಜಾ ಽ ಯ ತಾ ಽ ಽ ಽ ಮ್
ಸಾ – ರಿ ಗ ಪ – – – ಗ – ಪ ಧ – – – –
ಜಾ ಽ ಯತಾ ಽ ಽ ಽ ಮ್ ಜಾ ಽ ಯತಾ ಽ ಽ ಽ ಮ್
ಪ – ಧ ಸಾ – – – –
ಜಾ ಽ ಯತಾ ಽ ಽ ಽ ಮ್

ಸೂಚನೆ:— ಸ್ವರಲಿಪಿ ಚಿನ್ಹ ಪರಿಚಯ.

(ಧ) ಸ್ವರಗಳ ಬುಡದಲ್ಲಿ (ಕೆಳಗೆ) (·) ಬಿಂದು ಚಿನ್ಹ ಇದ್ದರೆ ಮಂದ್ರ ಸ್ವರ ಎಂದು ತಿಳಿಯಬೇಕು.

(ಸಾ ರಿ ಗ) ಸ್ವರಗಳ ತಲೆಮೇಲೆ (·) ಬಿಂದು ಚಿನ್ಹ ಇದ್ದರೆ ತಾರಸಪ್ತಕ ಸ್ವರ ಎಂದು ತಿಳಿಯಬೇಕು.

---

# ಶ್ರದ್ಧಾಂಜಲಿ

"ಮಾತೃದೇವೋಭವ, ಪಿತೃದೇವೋಭವ"

ಕರ್ನಾಟಿಕ ರಾಜ್ಯ

ಬೀದರ ಜಿಲ್ಲಾ, ಗೋರಟಾ ಗ್ರಾಮ ಹಿರೇಮಠದ
ಶಿವೈಕ್ಯ ಪರಮಪೂಜ್ಯ ಮಾತಾ ಪಿತೃಗಳಾದ,

ರೇವಣಸಿದ್ಧಸ್ವಾಮಿ ಅವರು
ತಾಯಿ ಗುರುದೇವಿ ಅವರು

ಉಭಯರ ಪಾದ ಕಮಲಗಳಲ್ಲಿ ಈ ಗ್ರಂಥ ರಚನೆಯ
ಚಿರಸ್ಮರಣೆಗಾಗಿ ಭಕ್ತಿ ಶ್ರದ್ಧಾಂಜಲಿಯನ್ನು ಸಮರ್ಪಿಸುವ




ತಮ್ಮ ಮಗು
ಗ್ರಂಥಕರ್ತಾ.



# ಸಮರ್ಪಣ

ಕರ್ನಾಟಕ ರಾಜ್ಯ ೦

ಬಿದರ ಜಿಲ್ಲಾ, ಮೇಹಕರ ಗ್ರಾಮದ ಕಟ್ಟೀಮನಿ ಸಂಸ್ಥಾನ ಬೃಹನ್ಮಠಾಧಿಪತಿ ಮೂಲ ಆಚಾರ್ಯರಿಗೆ ಸಂಬೋಧಿಸಿ:—

ಯಾವ "ವಿರೂಪ" ರೂಪಾತೀತವಾದ ನಿಷ್ಕಲ ಬ್ರಹ್ಮಶಕ್ತಿಯು ಅದು ತನ್ನ "ಅಕ್ಷ" ಜ್ಞಾನಾಕ್ಷದಿಂದ ವಿಶ್ವಜೀವಿಗಳ ಪಾಪ ಪುಣ್ಯಮಯ ಕರ್ಮಯೋಗಕ್ಕೆ ಸಾಕ್ಷೀಭೂತವಾಗಿ ವಿರಾಜಿಸುತ್ತಿದೆಯೋ; ಆ ಸಕಲ ಬ್ರಹ್ಮರೂಪ "ಶ್ರೀ ಗುರು ವಿರೂಪಾಕ್ಷ ಲಿಂಗ" ದಿವ್ಯ ಸನ್ನಿಧಾನದಲ್ಲಿ "ಧರ್ಮ ಮತ್ತು ರಾಷ್ಟ್ರ" ವೆಂಬ ಈ ಗ್ರಂಥ ಕುಸುಮವನ್ನು ಅನನ್ಯ ಭಾವಭಕ್ತಿಯಲಿ— ಸಮರ್ಪಿಸುತ್ತೇನೆ.

ಗ್ರಂಥಕರ್ತಾ.

# ಆ ಶೀ ೯ ವಾ ರ್ ದ

೦೩೦

ಶ್ರೀ ಷ. ಬ್ರ. ರಾಜಕೋಟಿ ಶಿವಾಚಾರ್ಯರು ಚರಪಟ್ಟಾಧಿಪತಿ ಕೆಟ್ಟೀಮುನಿ ಸಂಸ್ಥಾನ ಹಿರೇಮಠ ಮೋಹಕರ ಜಿ. ಬಿದರ ಅವರಿಂದ–

ವಾಚಕ ಮಹಾಜನಗಳಲ್ಲಿ ವಿದಿತಗೊಳಿಸಲು ಅತ್ಯಾನಂದವಾಗುತ್ತದೆ. "ಧರ್ಮ ಮತ್ತು ರಾಷ್ಟ್ರ" ವೆಂಬ ವಿಮರ್ಶನಾತ್ಮಕ ತಾತ್ವಿಕ ಗ್ರಂಥವ ಪ್ರಕಾಶನೆಗಾಗಿ ಅದರ ಸಮಗ್ರ ಧನವನೆಲ್ಲ ಗುರುಸನ್ನಿಧಿಗೆ ದಕ್ಷಿಣಾರೂಪದಲ್ಲಿ ೧೫೦೦ ರೂಪಾಯಿಗಳು ಸೇವೆ ಸಲ್ಲಿಸಿ ಈ ಗ್ರಂಥ ಕುಸುಮವನ್ನು ಸರ್ವರಿಗೆ ಸಲ್ಲಿಸುವ ಸುಯೋಗವನ್ನು ಒದಗಿಸಿಕೊಟ್ಟ ಶ್ರೀಮಾನ್ ಸಿದ್ಧನಾಥ ಮಾಲಿ ಗೌಡರು ಅರಣಕಲ್ಲ, ತಾ. ಚಿತಾಪೂರ ಜಿಲ್ಲಾ ಕಲಬುರಗಿ ಇವರೇ ಆಗಿರುವರು.

ಇವರು ನಮ್ಮ ಗುರುಪೀಠದ ಪರಂಪರಾಗತ ಶಿಷ್ಯರತ್ನರು. ಚಿಕ್ಕ ವಯಸ್ಸಿನಲ್ಲಿರುವಾಗಲೇ ಇವರ ತಂದೆಯವರಾದ ಶಿವಪ್ಪ ಗೌಡರು ಶಿವೈಕ್ಯ ಹೊಂದಿದರು. ಇವರ ತಾಯಿಯವರಾದ ಶ್ರೀಮತಿ ಸಂಗಮ್ಮ ಗೌಡತಿಯುವರು ಒಳ್ಳೆಯ ಧೈರ್ಯತನದಿಂದ ಬಂದ ಕಷ್ಟಗಳನ್ನು ಸಹಿಸುತ್ತ ಮಗನ ವಿದ್ಯಾಭ್ಯಾಸಾದಿಗಳನ್ನು ಮುಗಿಸಿದರು. ಮಗನು ಕಲಿತು ದೊಡ್ಡವರಾಗಿ ವಿವಾಹಿತರಾದರು. ಮುಂದೆ ಅಲ್ಪ ಕಾಲದಲ್ಲಿಯೇ ಮಾತೆಯವರು ಸಹ ಕಾಲವಶರಾದರು. "ಎಕಶ್ಚಂದ್ರ ತಮೋಹಂತಿ ನಚತಾರಾ ಗಣೋಪಿಚ" ಎಂಬಂತೆ ಅಂತರಿಕ್ಷದಲ್ಲಿ ಅಗಣಿತ ಚಿಕ್ಕೆಗಳಿದ್ದರೂ ಪ್ರಕಾಶವನ್ನು

ಕೊಟ್ಟು ಆನಂದಿಸಲಾರವು. ಆದರೆ ಒಬ್ಬನೇ ಚಂದ್ರನು ಲೋಕದ ಜೀವಿ-ಗಳಿಗೆಲ್ಲ ಬೆಳಗಿ ತನ್ನ ಅಮೃತಪ್ರಾಯ ಕಿರಣಗಳಿಂದ ಎಲ್ಲರನ್ನು ಆನಂದಿ-ಸುವಂತೆ ಮನೆತನಕೆ ಒಬ್ಬರೇಯಾಗಿರುವರು. ಇವರು ದೊಡ್ಡ ಜಮೀನ-ದಾರರು. ಇವರ ಮುಖ್ಯ ವ್ಯವಸಾಯವೆಂದರೆ "ಕೋಟಿ ಉದ್ಯೋಗಗಳಲ್ಲಿ ಮೇಟಿ ಉದ್ಯೋಗವೇ ಲೇಸೆಂಬಂತೆ" ಕೃಷಿ ಉದ್ಯಮೆ ಒಂದೇಯಾಗಿರು-ವದು. ವಯಸ್ಸಿನಲ್ಲಿ ಚಿಕ್ಕವರಾದರೂ ದುರಾಚಾರ ದುರ್ವ್ಯಸನದ ಸೋಂಕಿ-ಲ್ಲದವರಾಗಿ ಶಾಂತ ಸ್ವಭಾವದಿಂದ ಸತ್ವಗುಣಿ ದೇವಪುರುಷನೋಪಾದಿಯಲಿ ತೋರುವರು. ಅರಣಕಲ್ಲ ಗ್ರಾಮ ದೇವರಾದ ಶ್ರೀಗುರು ರೇವಣಾ-ಸಿದ್ಧೇಶ್ವರ ಮಂದಿರವು ಜೀರ್ಣಾವಸ್ಥೆಯಲ್ಲಿ ಸಣ್ಣದಾಕಾರವಾಗಿತ್ತು. ಮಂದಿರವನ್ನು ಕಟ್ಟಿಸಬೇಕೆಂಬ ಆಪೇಕ್ಷೆಯು ಪುರ ಜನಗಳಲ್ಲಿ ಎಂದಿನಿಂದಲೂ ಮೂಡಿತ್ತು. ಆದರೆ ಗ್ರಾಮದ ಮುಖ್ಯಾಧಿಕಾರಿಗಳಾದ ಗೌಡರು ತಾವು ಸನ್ನದ್ಧರಾಗಿ ನಿಂತು ಶ್ರೀ ಗುರುವಿನ ಮಂದಿರ ಕಟ್ಟಡ ಕಾರ್ಯವನ್ನು ಕೈ-ಕೊಂಡು ಬಹು ಮನೋಹರವಾಗಿ ರಚಿಸಿದರು ಒಂದು ಸಾವಿರ ವರುಷದ ಆಶೆಗೆ ಭಂಗ ಬಾರದಂತೆ ಭದ್ರವಾಗಿ ಮಾಡಿಸಿದರು. ಗ್ರಾಮದ ಸಣ್ಣ ದೊಡ್ಡ ಜೀವಿಗಳೆಲ್ಲ ಪ್ರೇಮದ ಸ್ವಾಮಿಯೆಂದು ಆದರ ಭಾವದಲ್ಲಿ ವರ್ತಿಸುತ್ತಾರೆ.

ಗುರು ಭಕ್ತ ಕೇಸರಿ ಎಂಬ ಬಿರುದಾವಳಿಗೆ ಶೋಭಿಸುತ್ತಿರುವ ಇವರನ್ನು ಮತ್ತೆ ಇವರ ಧರ್ಮಪತ್ನಿಯವರಾದ ಸೌ|| ಕಮಲಾದೇವಿ-ಯವರನ್ನು ದೇಶಭಕ್ತಿ, ಈಶಭಕ್ತಿ ಈ ದೈವೀ ಸಂಪತ್ತನ್ನು ದಯಪಾಲಿಸಿ ಆಯುಷ್ಯ, ಆರೋಗ್ಯ ಸಂತತೀ ಸಂಪತ್ತಿ ಸಕಲೈಶ್ವರ್ಯ ಪಡೆದು ಕೀರ್ತಿ-ರೂಪದಲ್ಲಿ ಅಮರ ಕಾಯರಾಗಿ ಸೂರ್ಯ ಚಂದ್ರರಂತೆ ಪ್ರಕಾಶಿಸಲೆಂದು ಅಖಂಡ ಆಶೀರ್ವಾದಿಸುತ್ತೇವೆ.

..................

§ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು §

# ಅ ಗ್ರ ವ ಚ ನ

ಶ್ರೀ ವೇ. ಮೂ. ತ್ರಿಕಾಲ ಲಿಂಗ ಪೂಜಾ ನಿಷ್ಠರಾದ ಸುರೇಶ ಸ್ವಾಮಿಗಳು (ಬನಹಟ್ಟಿ) ಹಿರೇಮಠ ಗೋರಟಾ ಜಿಲ್ಲಾ ಬೀದರ ಅವರು ಅತ್ಯಂತ ರಹಸ್ಯಾತ್ಮಕ ವಿಷಯವನ್ನೊಳಗೊಂಡ " ಧರ್ಮ ಮತ್ತು ರಾಷ್ಟ್ರ" ( Religion and Nation ) ಹೆಸರಿನ ಗ್ರಂಥವನ್ನು ನೂತನವಾಗಿ ಬರೆದು ರಚಿಸಿರುವರು. ಈ ವಿಜ್ಞಾನಾತ್ಮಕ ( Scientific ) ತತ್ವವನ್ನು ತಯಾರಿಸಲು ಶಿವ ಸಂಕಲ್ಪವನ್ನು ಗೈದವರೆಂದರೆ, ಪರಮ ಪೂಜ್ಯ ಪಿತೃಗಳಾದ ಶ್ರೀ ವೇಂ. ಸಿದ್ಧವೀರ ಸ್ವಾಮಿ ಬನಹಟ್ಟಿ ಅವರೇ ಆಗಿರುವರು. ಅವರ ಪ್ರೇರಣೆಗೆ ಮೂಲಾಧಾರವಾಗಿ ತೋರಿದ್ದು ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯ ಮುಖೋದ್ಗೀರಣ "ಸಿದ್ಧಾಂತ ಶಿಖಾಮಣಿ" ನಾಮಕ ಸಂಸ್ಕೃತ ಗ್ರಂಥದಲ್ಲಿ ಪ್ರಸಾದ ರೂಪವಾಗಿ ಪ್ರಾಪ್ತವಾದ "ಅಹಿಂಸಾ ಸತ್ಯ ಮಸ್ತೇಯಂ" ವೆಂಬ ಒಂದೇ ಒಂದು ಶ್ಲೋಕವಾಗಿರುವದು. ಆ ಒಂದು ಶ್ಲೋಕವನ್ನೇ ಗ್ರಂಥ ಕರ್ತರಿಗೆ ಅವರ ಕೃಪಾಶೀರ್ವಾದ ಫಲವಾಗಿ ಪ್ರಾಪ್ತವಾಗಿರುತ್ತದೆ. ಅದನ್ನೇ ಪ್ರಮಾಣವಾಗಿಟ್ಟುಕೊಂಡು ವಿಶ್ಲೇಷಣೆ ಮಾಡಿರುವರು.

ಕಾಲಮಹಿಮೆಯಿಂದ ಧರ್ಮದ ಬಗ್ಗೆ ಕೆಲವರಿಗೆ ಅದರಿಂದ ಏನು ಪ್ರಯೋಜನವಿದೆ, ಎಂದು ಬೇಡವಾಗಿದೆ ಕೆಲವರಿಗೆ ಮನಸೋಕ್ತ ಸಂಸಾರ ಸುಖವನ್ನು ಅನುಭೋಗಿಸುವಲ್ಲಿ ಅಡ್ಡಿ ಪಡಿಸುವದೆಂದು ಬೇಡವಾಗಿದೆ. ಮತ್ತೆ ಕೆಲವರಿಗೆ ಸತ್ತಮೇಲೆ ಸುಖ ಕೊಡುವ ಈ ಗೊಡ್ಡು ಧರ್ಮವು ನಮಗೇಕೆ ಬೇಕು ಎಂದು ಅದು ಬೇಡವಾಗಿದೆ. ಕೆಲವರಿಗೆ ಹೊಟ್ಟೆ-ಬಟ್ಟೆಗೆ ಅವಕಾಶವಿಲ್ಲದು, ಅದು ಏತರ ಧರ್ಮವೆಂದು ಬೇಡವಾಗಿದೆ. ಕೆಲವರಿಗೆ ಧರ್ಮದ ಯತಾರ್ಥ ಜ್ಞಾನವು ಅರಿಯದಾಗಿ ಅದು ಬೇಡವಾಗಿದೆ. ಇನ್ನೊಂದು ಕಡೆಗೆ ಧರ್ಮ ಜಗದ್ಗುರು ಪಂಚ ಮಹಾ ಪೀಠಗಳು ಒಂದಾಗಿ ಕೂಡಿ ಒಂದು ಧ್ಯೇಯ ಒಂದು ತತ್ವ, ಒಂದು ವಿಚಾರ, ಒಂದು ಉಚ್ಚಾರ ಒಂದು ಆಚಾರದಿಂದ ಹರಿದು ಧರ್ಮ ಸಂವಿಧಾನವನ್ನು ( Religion-Constitution ) ಕಾಲ ಪರಿಸ್ಥಿತಿಗನುಸಾರ ತಯಾರಿಸಿ ತನ್ಮೂಲಕ ವಾರ್ಷಿಕ ಸಭಾ ಸಮ್ಮೇಲನಗಳನ್ನು ನೆರವಿ ಉಪ ಪೀಠಾಧೀಶರಿಗೆಲ್ಲ ಪ್ರಜಾಜನರಲ್ಲಿ ಪ್ರೇಮ ಸಮೃದ್ಧಿ, ಜ್ಞಾನ ಸಮೃದ್ಧಿ, ತತ್ವ ಸಮೃದ್ಧಿ, ಪುಣ್ಯ ಸಮೃದ್ಧಿ, ಧರ್ಮ ಸಮೃದ್ಧಿಗೊಳಿಸುವ ಕರ್ಮಾನುಷ್ಠಾನಗಳ ಪಾಠ ಕೊಟ್ಟು, ಸಂದೇಶ ನೀಡಿ ರಾಷ್ಟ್ರದಲ್ಲೆಲ್ಲ, ಪಕ್ಷೋತ್ಸವ, ಮಾಸೋತ್ಸವ, ವರ್ಷೋತ್ಸವ ನಿಮಿತ್ತ ಧರ್ಮ ಶಿಕ್ಷಣದ, ಪ್ರಚಾರಾರ್ಥವಾಗಿ ದೊಡ್ಡ, ದೊಡ್ಡ ಜಪ ಯಜ್ಞಾದಿಕ ಪ್ರಯೋಗಾತ್ಮಕವಾದ ಸಾಮೂಹಿಕ ಸಮಾರಂಭಗಳನ್ನು, ಮಂಗಲೋತ್ಸವಗಳನ್ನು ಬೆಳೆಯಿಸಬೇಕಾಗಿದೆ. ಮತ್ತೆ ಪ್ರಾಚೀನ ಕಾಲದಂತೆ ಗುರು ಕುಲಾಶ್ರಮದಲ್ಲಿ ಧರ್ಮ ದೀಕ್ಷೆಯನ್ನು ಒಟುಗಳಿಗೆ ವಿತ್ತು ಮಾನವ ಸಮಾಜದ ಉದ್ಧಾರಕೋಸ್ಕರ, ಅಧಿ ಭೌತಿಕ, ಆದಿ ದೈವಿಕ, ಆಧ್ಯಾತ್ಮಿಕ ಶಕ್ತಿ ಸಂಪನ್ನ ಯೋಗ್ಯ ಗುರು ಮೂರ್ತಿಗಳನ್ನು ತಯಾರಿಸಿ ಮಠ ಪೀಠಗಳಿಗೆಲ್ಲ ನಿಯೋಜನೆ ಮಾಡಿ ಭದ್ರಗೊಳಿಸುವ ಮಹತ್ಕರ್ತವ್ಯವನ್ನು ಜಗದ್ಗುರು ಪಂಚ ಮಹಾ ಪೀಠಗಳು ಮರೆತು ಬಿಟ್ಟವು. ಆ ಕಾರಣ ಉಪ ಪೀಠಾಚಾರ್ಯರು ಶ್ರೀ ಜಗದ್ಗುರು ಪಂಚ ಮಹಾ ಪೀಠಾಚಾರ್ಯರ ಸನ್ನಿಧಿಗೆ ಗಮಿಸಿ, ಗುರು ತತ್ವದ ಪರಂಪರೆಗನುಸಾರ

ಭಕ್ತ್ಯಾದಿಕ ತನು ಮನ ಧನ ಸೇವೆ ಸಲ್ಲಿಸಿ ದರ್ಶನಾಶೀರ್ವಾದ ಪಡೆದು ಗುರು ಶಿಷ್ಯ ಭಾವವುಳ್ಳವರಾಗಿರಬೇಕೆಂಬ ಪರಸ್ಪರ ಪ್ರೇಮದ ಸೂತ್ರವು ಕಡಿದು ಹೋಯಿತು. ಅಂದಿನಿಂದ ಉಪಪೀಠಾಚಾರ್ಯರು ಜ್ಞಾನಹೀನ, ತಪೋಹೀನ, ಕ್ರಿಯಾಹೀನ, ನಿಷ್ಠಾಹೀನ, ಭಾವಹೀನ, ಭಕ್ತಿಹೀನ, ವ್ರತಹೀನ, ಸ್ನಾನಹೀನ, ಸಂಧ್ಯಾಹೀನ, ಪೂಜಾಹೀನ, ಜಪಹೀನ, ಪುಣ್ಯಹೀನರಾಗಿ ರಾಷ್ಟ್ರ ಮತ್ತು ಧರ್ಮದ ಸ್ವಾಭಿಮಾನ ಶೂನ್ಯತೆಯಿಂದ ವರ್ತಿಸಹತ್ತಿದರು. ಜನ್ಮ ನೀಡಿದ ತಾಯಿಯೇ ಮುನಿದ ಮೇಲೆ ಶಿಶುವಿನ ಆರೈಕೆಗೆ ಆಧಾರವೇ ಯಾರದೂ ಇಲ್ಲದಾಗುವಂತೆ ಉಪ ಪೀಠಾಚಾರ್ಯರು ಅನಾಯಕರಾಗಿ ಮಠ ಪೀಠಗಳು ದಿನೇ ದಿನೆ ಜೀರ್ಣಿಸುತ್ತ ನಿರ್ನಾಮಗೊಳ್ಳಹತ್ತಿದವು ಈ ವಿಷಮತೆಯ ಕಾರಣದಿಂದ ರಾಷ್ಟ್ರದ ಪ್ರಜಾ ಜನರಲ್ಲಿ ಪರಸ್ಪರ ಪ್ರೇಮ ಭಾವವಳಿದು, ಮಾತೃಭಕ್ತಿ, ಪಿತೃಭಕ್ತಿ, ಆಚಾರ್ಯಭಕ್ತಿ, ದೇಶ ಭಕ್ತಿಯು ನಷ್ಟವಾಗಿ ನಾಸ್ತಿಕ್ಯ ಭಾವವು ಬೆಳೆಯ ಹತ್ತಿತು. ಅಲ್ಲದೆ ರಾಷ್ಟ್ರದಲ್ಲಿ ಸ್ವಾರ್ಥ, ದ್ವೇಷ, ಅಸೂಯ, ಕಾಪಟ್ಯ, ಲಂಚ, ಮೋಸ ಹಿಂಸೆ, ಸುಳ್ಳು, ಕಳವು, ವ್ಯಭಿಚಾರ, ಮಾಂಸ ಸೇವನ, ಮದ್ಯಪಾನ, ಜೂಜು ಮುಂತಾದ ದೋಷಗಳು ಸಹ ಹೆಚ್ಚಿದವು. ಹೀಗಾಗಿ ಅರಸರ ಅರಮನೆಯಿಂದ ಬಡವನ ಗುಡಿಸಲವರೆಗೆ ದಾರಿದ್ರ್ಯ, ದುಃಖ, ರೋಗ, ಚಿಂತೆ, ಭಯ, ಪೀಡೆ ಇವುಗಳೇ ತುಂಬಿ ಎಲ್ಲೆಲ್ಲಿಯೂ ಅಶಾಂತತೆ, ಅಸ್ಸಮಾಧಾನತೆಯ ಹಾ ಹಾಕಾರವೇ ಎದ್ದು ಕಾಣುತ್ತಿದೆ. ಆದ್ದರಿಂದ ರಾಷ್ಟ್ರದ ಐಕ್ಯತೆಯು ಭಂಗವಾಗಿ, ವ್ಯಾಪಕ ಸುಖ-ಶಾಂತಿಯು ದುಸ್ತರವಾಗಿ ತೋರಹತ್ತಿದೆ. ಧರ್ಮ ಭೀತಿ ಮತ್ತು ರಾಷ್ಟ್ರ ಭೀತಿ ಯಾವದೂ ಉಳಿಯದಂತಾಗಿ ರಾಷ್ಟ್ರಕ್ಕೆ ಪ್ರಜಾ ರಾಜ್ಯದ ಬದಲು ಪಶು ರಾಜ್ಯವೆಂದು ಕರೆಯುವಂತಹ ಶೋಚನೀಯ ಸ್ಥಿತಿಯಾಗಿದೆ. ಇದನ್ನೆಲ್ಲ ಅರಿತು "ಧರ್ಮ ಮತ್ತು ರಾಷ್ಟ್ರ ಇವೆರಡು ಏಕ ಮುಖವಾಗಿ ಹರಿಯದೆ ಅನೇಕ ಮುಖವಾಗಿ ಹರಿದರೆ ರಾಷ್ಟ್ರದ ಉನ್ನತಿಯ ಮಾರ್ಗವು ಕುಂಠಿಸಿ ಎರಡೂ ಹತಬಲಗಳಾಗಿ ಹೋಗುವವು.

"ನೈಕಂ ಚಕ್ರಂ ಪರಿಭ್ರಮತಿ" (ಚಾಣಕ್ಯ ಸೂತ್ರ) ಒಂದೇ ಚಕ್ರದ ರಥವು ಗಮನಶೀಲವಾಗಲಾರದು. ಆ ರಥವು ಸುಗಮವಾಗಿ ಸಾಗಬೇಕಾದರೆ ಅದಕ್ಕೆ ಸಮವಾದ ಎರಡು ಚಕ್ರಗಳು ಆವಶ್ಯಕವಾಗಿರುವಂತೆ. ಮಾನವನ ಸಂಸಾರ ರಥವು ನಿರ್ವಿಘ್ನತೆಯಿಂದ ಸಾಗಿ ತನ್ನ ಮೂಲ ಸುಖದ ಧ್ಯೇಯಕ್ಕೆ ಮುಟ್ಟಲು ಅದಕ್ಕೆ ಧರ್ಮ ಮತ್ತು ರಾಷ್ಟ್ರ ಇವೆರಡೂ ಅನಿವಾರ್ಯ ಆವಶ್ಯಕಗಳಾಗಿವೆ. ಇವೆರಡರಲ್ಲಿ ಒಂದು ಕೊರತೆಯಾದರೆ ಮಾನವ ಜೀವಿತ ರಥವು ನಷ್ಟ ಭ್ರಷ್ಟವಾಗಿಯೇ ಹೋಗುವದು ಇದು ಸತ್ಯವೆಂದು ಗ್ರಂಥ ಕರ್ತರು ಒಳ್ಳೆಯ ತಾತ್ವಿಕ ವಿವೇಚನೆಯಿಂದ ಸಿದ್ಧಪಡಿಸಿದ್ದಾರೆ.

ಮಾನವನ "ಅಭ್ಯುದಯ ಮತ್ತು ನಿಶ್ರೇಯಸ" ಸಿದ್ಧಿಯ ಭವಿತವ್ಯದ ಪೂರ್ಣತೆಗಾಗಿ "ಧರ್ಮ" ವು ಪಶುತ್ವ, ಮನುಷ್ಯತ್ವ, ದೇವತ್ವ, ದಿಂದ ಜೀವನ ಮುಕ್ತಿಯ ಪರಮ ಪದವಿಯಾದ ಪರಶಿವ ತತ್ವದ ಸಾಮರಸ್ಯದೆಡೆಗೆ ಉತ್ತರೋತ್ತರ ಜ್ಞಾನಾಭಿವೃದ್ಧಿಯಾಗುವ ಆಂತರಿಕ ಸುಧಾರಣೆಗೊಳಿಸುವದು. ಮತ್ತೆ ರಾಷ್ಟ್ರವು ಆ ಜ್ಞಾನ ಕ್ರಿಯದ ಸ್ಥಿರತೆಗೋಸುಗ ರಕ್ಷಣೆಯ ಅಂಗವಾಗಿ ಬಹಿರ್ ಸುಧಾರಣೆಗೊಳಿಸುವದು ಹೀಗೆ ಧರ್ಮ ಮತ್ತು ರಾಷ್ಟ್ರ ಇವು ಒಂದು ದಂಡದ ಎರಡು ತುದಿಗಳಿರುವಂತೆ ಸಯುಕ್ತಿಕವಾಗಿ ಸಿದ್ಧ ಪಡಿಸಿರುವರು.

ಧರ್ಮವು ಮಾನವನ ಸ್ವಭಾವ ಸಿದ್ಧ ಪ್ರವೃತ್ತಿಯೆಂದು, ಆ ಸ್ವಭಾವ ಸಿದ್ಧ ಪ್ರವೃತ್ತಿಯನ್ನೇ ಪ್ರತ್ಯಕ್ಷ ಪ್ರಯೋಗಾತ್ಮಕವಾಗಿ ಬಳಿಕೆಯಲ್ಲಿ ತಂದು ದೇಶ ಕಾಲ ಪರಸ್ಥಿತಿಗನುಸಾರ ಭಿನ್ನ ವಸ್ತು ಭಿನ್ನ ಜೀವಿಗಳಲ್ಲಿ ಉಪಯುಕ್ತಗೊಳ್ಳುವದಕ್ಕೆ ಧರ್ಮಾಚಾರವೆಂದು, ಆ ಧರ್ಮಾಚಾರವನ್ನೇ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಬೋಧಿಸಿದರೆಂದು ಅವರೇ ಧರ್ಮಾಚಾರ್ಯರಾಗಿ ಕರೆಯಲ್ಪಡುವರೆಂದು ಅನುಭವ ಮತ್ತು ಶಾಸ್ತ್ರ ಇವೆರಡರ ಮೂಲಕ ಸುಸಂಗತವಾಗಿ ಸಿದ್ಧ ಪಡಿಸಿದ್ದಾರೆ. ಧರ್ಮದ

ಅಜ್ಞಾನತೆಯ ಮೂಲಕ ಸಂಸಾರಕ್ಕೆ ಸಂಹರಿಸುವ ಕಾಲರೂಪೀ ಜಾತಿ, ಕುಲ, ಮತ, ಪಂಥ, ಸಮಾಜವೆಂಬೀ ಸಂಶಯ ಭೂತವನ್ನೆಲ್ಲ ತರ್ಕ ಶಾಸ್ತ್ರಾನುಮೂಲಕ ಅರಣ್ಯಪಾಲು ಗೊಳಿಸಿದ್ದಾರೆ.

ಮಾನವನ ಹುಟ್ಟು ಪ್ರೇಮದಲ್ಲಿ, ಮಾನವನ ಬೆಳವಣಿಗೆ ಪ್ರೇಮದಲ್ಲಿ, ಮಾನವನ ಬದುಕು ಪ್ರೇಮದಲ್ಲಿ, ಹೀಗೆ ಸರ್ವ ವಿಧವಾಗಿ ಪ್ರೇಮವೇ ಮುಖ್ಯವಾಗಿರುವದು. ಅಂದ ಮೇಲೆ ರಾಷ್ಟ್ರದ ಘಟಕರೆನಿಸಿದ ಪ್ರಜರಲ್ಲಿ ಪರಸ್ಪರ ಪ್ರೇಮ ಹುಟ್ಟಿಸುವ ಸಾಧನೆಯು ಇರದಿದ್ದಾಗ ರಾಜ ಪ್ರಜರ ಐಕ್ಯತೆಯ ಭಕ್ತಿ ಪ್ರೇಮದ ಭಾವಗಳು ತಾನೆ ಉದಿಸುವದು ಹೇಗೆ ಸಾಧ್ಯ? ಅವು ಹುಟ್ಟದಿದ್ದಲ್ಲಿ ಸರ್ವತ್ರ ಅರಾಜಕತೆಯುಂಟಾಗಿ ಅಶಾಂತತೆಯು ಬೆಳೆದು ರಾಷ್ಟ್ರವು ರಸಾತಳಕೆ ಇಳಿಯುವದು ಸಹಜ. ಬರೀ ಅನ್ನ ವಿಕಾಸ, ವಸ್ತ್ರ ವಿಕಾಸ, ನಾನಾ ವಿಧ ಬೌತಿಕ ವಿದ್ಯಾ ವಿಕಾಸ, ಕಲಾ ವಿಕಾಸ, ಹೀಗೆ ಅನಂತಾನಂತ ವಿಕಾಸ ಯೋಜನೆಗಳು ನಿರ್ಮಿಸಿ ತನ್ನ ಪ್ರಜರಿಗೆಲ್ಲ ಸುಖಮಯರನ್ನಾಗಿ ಮಾಡಿ ಕೇವಲ ಶಸ್ತ್ರ ಬಲದಿಂದಲಷ್ಟೇ ಅಜಿಂಕ್ಯವಾಗಿರುವ ಹೆಮ್ಮೆಯೊಂದೇ ರಾಷ್ಟ್ರವು ಹಿಡಿದಲ್ಲಿ ಗಿಡದ ಮೇಲೆ ನಿಂತು ಬುಡವನ್ನು ಕಡಿಯುವನಂತೆಯೇ ಅದರ ಬಾಳುವೆ ಸರಿ. ಕಾರಣ ಎಷ್ಟು ಭೋಗ ಸಾಮಗ್ರಿಗಳು ನಿರ್ಮಿಸಿದರೂ ಆ ಭೋಗ ಪದಾರ್ಥಗಳ ಸೇವನೆಗೊಳ್ಳುವ ಪಾತ್ರತೆಯು ಪ್ರಜರಿಗೆ ಇರದಿದ್ದಲ್ಲಿ ? ಒಂದು ವೇಳೆ ಪಾತ್ರತೆಯು ಇದ್ದು; ಸಂತೃಪ್ತಿಗೊಳ್ಳದ ಈ ಮನಕ್ಕೆ ಉಪಾಯವೇನು? ಏನೂ ಇಲ್ಲದ ದರಿದ್ರನಿಗೆ ಒಂದು ನೂರು ರೂಪಾಯಿ ಸಿಕ್ಕರೆ ಮತ್ತೆ ಸಾವಿರದ ಹರಕೆ ಮಾಡುವನು. ಅದು ಸಿಕ್ಕರೆ ಲಕ್ಷವೆನ್ನುವನು. ಮತ್ತೆ ಮಂತ್ರಿ ಮಹಾಮಂತ್ರಿಎನ್ನುತ್ತ ಕೊನೆಗೆ ವಿಶ್ವಾಧಿಪತ್ಯವನ್ನು ಬಯಸುವನು. ಅಂದಮೇಲೆ 'ಲೋಭಾವಧಿಂ ಕೋಗತಃ' ಎಂಬಂತೆ ಆಶೆಯ ಸೀಮೆಯನ್ನು ಮುಟ್ಟಿದವನಾರು ? ಇದು ಇಲ್ಲವೇ ಇಲ್ಲ. ಅದನ್ನು ಜ್ಞಾನದಿಂದ ಪ್ರೇಮದಿಂದ ತ್ಯಾಗ ವಿಚಾರ

ದಿಂದಲೇ ಸಂಯ್ಯಮಿತ ಹೊಂದಿ ತೃಪ್ತಿಗೊಳಿಸಲು ಸಾಧ್ಯ. ಆ ಶುದ್ಧ ಪ್ರೇಮವನ್ನು ಹುಟ್ಟಿಸುವ ಮುಖ್ಯ ಶಾಸ್ತ್ರವೆಂದರೆ ಧರ್ಮ ಒಂದೇಯಾಗಿದೆ.

"ಧರ್ಮೇ ಸರ್ವಂ ಪ್ರತಿಷ್ಠಿತಂ" ಎಂಬಂತೆ ಸರ್ವವೂ ಧರ್ಮದಿಂದಲೇ ಪ್ರಾಪ್ತವಾಗುವದು. ರಾಷ್ಟ್ರದ ರಾಜ್ಯ ಘಟನೆಯಲ್ಲ ಪ್ರೇಮ ಬಂಧನೆಯ ಶಾಸ್ತ್ರ ವಾಗಿದೆಯಷ್ಟೇ; ಅದನ್ನು ಮೀರಿದರೆ ರಾಷ್ಟ್ರದಲ್ಲಿ ನಾಸ್ತಿಕ್ಯ ಹುಟ್ಟಿ ಪ್ರಜನು ರಾಷ್ಟ್ರಬಾಹ್ಯನಾಗಿ ಶಿಕ್ಷೆಗೆ ಪಾತ್ರನಾಗುವನು ಇಲ್ಲವಾದರೆ ರಾಷ್ಟ್ರ ಪ್ರೇಮಿ ಭಕ್ತನಾಗಿ ರಕ್ಷಣೆಗೆ ಪಾತ್ರನಾಗುವನು. ರಾಷ್ಟ್ರವುಪ್ರೇಮ ಭಕ್ತಿಯನ್ನು ವಿಕಾಸಗೊಳಿಸುವ ಸಾಧನೆಂತಾದ ಮೂಲ ಧರ್ಮವು ಬಿಟ್ಟಲ್ಲಿ ಅದು ಉಳಿಯುವದಿಲ್ಲ. ಕಾರಣ ಧರ್ಮವು ರಾಷ್ಟ್ರದ ತಳಹದಿ, ಧರ್ಮವು ರಾಷ್ಟ್ರದ ಗುಟ್ಟು, ಧರ್ಮವು ರಾಷ್ಟ್ರದ ಪ್ರಾಣವೆಂದು ಮಾನಸ ಶಾಸ್ತ್ರ ಮೂಲಕ ಬಹು ಸುಂದರವಾಗಿ ಸಿದ್ಧ ಪಡಿಸಿದ್ದಾರೆ. ಇಂತಹ ಶಾಸ್ತ್ರ ಸಿದ್ಧಾಂತಗಳು ಈಗಿನಕಾಲದಲ್ಲಿ ಬಹು ಅಪರೂಪವಾಗಿ ಕಾಣುತ್ತವೆ.

ಈ ಗ್ರಂಥವನ್ನು ಕಷ್ಟ ಪಟ್ಟು ಓದಿದವರಿಗೆ ವಿಸ್ಮಯಗೊಳಿಸದೇ ಇರದು. ಇದು ಕಥಾ ಕಾದಂಬರಿಯಂತೆ ಓದಿ ಒಗೆದು ಬಿಡುವಂಥಾದಲ್ಲ. ಅದನ್ನು ಪುನಃ ಪುನಃ ಅಭ್ಯಾಸಿಸಿದಂತೆಲ್ಲ ಹೆಚ್ಚಿನ ತಿರುಳು ಹೊರ ಸೂಸುತ್ತ ಮಾನವನ ಮೆದುಳಿಗೆ ಮತ್ತಿಷ್ಟು ವೈಚಾರಿಕ ಕ್ರಾಂತಿಗೆ ಅವಕಾಶವನ್ನು ಕೊಡುವಂಥಾದ್ದಾಗಿದೆ. ಇಂಥಾ ಅಮೌಲಿಕ ತಾತ್ವಿಕ ಸ್ವರೂಪದ ಶಾಸ್ತ್ರ ಸಿದ್ಧಾಂತಗಳನ್ನು ತಯಾರಿಸಿ ವಿಶ್ವ ಕಲ್ಯಾಣದ ಘನತರ ಕಾರ್ಯವನ್ನು ಕೈಕೊಂಡ ಮಹಾ ತಪೋ ಧನಿಕರೇ,ಆ ಚಾರ್ಯವಂಶೋದ್ಭವರೇ, ಗುರುತತ್ವಾಭಿಮಾನಿಗಳೇ, ಮಾನವ ಧರ್ಮೋಪಾಸಕರೇ, ವೀರವ್ರತಧಾರಿಗಳೇ, ಪಿತೃಕುಲೋದ್ಧಾರಕರೇ; ತಮ್ಮ ಜೀವಿತವು ಧನ್ಯ; ತಮ್ಮ ತಪವು ಸಫಲ, ತಮ್ಮ ಮಾತೃ–ಪಿತೃಗಳು ಪಾವನರು. ಈ ಗ್ರಂಥವು ಬರೆಯಬೇಕೆಂದು ಸಂಕಲ್ಪ ಮಾಡಿ ತಮ್ಮ ಲೇಖನಿಯು ಸಾಗಿಲ್ಲ ಧರ್ಮವು ಮಾನವನ ವಿಕಾ-

ಸದ ವಿಜ್ಞಾನ ಶಾಸ್ತ್ರವೆಂದು ಬರೆಯುವ "ಧರ್ಮ ಶಾಸ್ತ್ರ" ವೆಂಬ ಹೆಸರಿನ ಗ್ರಂಥ ರಚನೆಯ ನಡುವೇ ಲೇಖಸಿಯು "ಘೃಣಾಕ್ಷರ ನ್ಯಾಯದಂತೆ" ಅರ್ಥಾತ ಕಟ್ಟಿಗೆ ಕೊರೆಯುವ ಕ್ರಿಮಿಯು ತನ್ನ ಸ್ವಭಾವ ಧರ್ಮದ ಅನುಗುಣವಾಗಿ ಕೊರೆಯುವ ಕಾರ್ಯದಲ್ಲಿ ಯಾವದೊಂದು ಅಕ್ಷರದ ಆಕೃತಿಯು ವಿನಾ ಸಂಕಲ್ಪ ನಿರ್ಮಿತವಾಗುವಂತೆ; ಈ ಗ್ರಂಥದ ನಿರ್ಮಿತಿಯಾಯಿತಷ್ಟೇ. ಅಲೌಕಿಕವಾಗಿ ತೋರಿ ಬರುವ ಈ ತಮ್ಮ ದಿವ್ಯ ಜ್ಞಾನ ಜ್ಯೋತಿಯು ಗುರುವಂಶ ಪರಂಪರೆಯಾಗಿ ಹರಿದು ವಿಶ್ವದ ಎಲ್ಲಾ ಕಡೆಗೆ ಪ್ರ ಕಾ ಶಿ ಸಿ ಮತ್ತೊಮ್ಮೆ ಆ ಅನುಗ್ರಹ ಕರ್ತರಾದ ಶ್ರೀ ಜಗದ್ಗುರು ಪಂಚಾಚಾರ್ಯರಿಂದ ಮಾನವ ಧರ್ಮದ ವಿಜಯ ಪತಾಕೆಯು "ಮಾನವ ಧರ್ಮಕ್ಕೆ ಜಯವಾಗಲಿ" ಧರ್ಮದಿಂದಲೇ ವಿಶ್ವಕ್ಕೆ ಶಾಂತಿಯೆಂಬ ಜಯ ಘೋಷ ನಿನಾದದೊಡನೆ ಹಾರಿ ಹರಿಸುತ್ತ ಮಾನವ ಜಾತಿಯ ಏಕಾತ್ಮ ಭಾವ ಮಾನವ ಜಾತಿಯ ಐಕ್ಯ ಭಾವ, ಮಾನವ ಜಾತಿಯ ಸರ್ವಾತ್ಮಭಾವದಲ್ಲಿ, ಶಾಸ್ತ್ರ, ಶಸ್ತ್ರ, ಅರ್ಥಾತ್ ಧರ್ಮ ಸರಕಾರ ಮತ್ತು ರಾಷ್ಟ್ರ ಸರಕಾರ ಇವು ಎರಡೂ ಒಂದಾಗಿ ತೋರಿ ವಿಶ್ವ ಶಾಂತಿ ಪಥಕ್ಕೆ ಗಮಿಸಲೆಂದು ಅನನ್ಯ ಭಾವದಲ್ಲಿ ಭಾವಿಸುವ.

## ಶ್ರೀಗುರು ಕಟ್ಟೀಮನಿ ಸಂಸ್ಥಾನ, ಹಿರೇಮಠ.

ಅಂಚೆ – ಮೆಹಕರ

ಮಾರ್ಗ – ಭಾಲ್ಕಿ

ಜಿಲ್ಹಾ – ಬೀದರ

( ಕರ್ನಾಟಕ ರಾಜ್ಯ )





ಲೇಖಕರು :

ೀ. ಸುರೇಶಸ್ವಾಮಿ (ಬನಹಟ್ಟಿ) ಹಿರೇಮಠ ಗೋರಟಾ (ಜಿ. ಬೀದರ)

# ವಿ ಜ್ಞಾ ಪ ನೆ

"ಧರ್ಮ ಮತ್ತು ರಾಷ್ಟ್ರ" ವೆಂಬ ಗ್ರಂಥವನ್ನು ಬರೆದು ಪ್ರಕಟಗೊಳಿಸಲು ಅತ್ಯಾನಂದವಾಗುತ್ತದೆ.

ಧರ್ಮವು ಮಾನವನಿಗೆ ನೈಸರ್ಗಿಕ ಸ್ವಾಭಾವಿಕ ಪ್ರವೃತ್ತಿ ಯಾದುದಾದರೂ ಧರ್ಮದ ವಿಷಯವಾಗಿ ಅನೇಕ ಭಿನ್ನಾಭಿಪ್ರಾಯಗಳು ನಿರ್ಮಿತವಾದರಿಂದ ಅಖಂಡ ಮಾನವ ಕುಲದಲ್ಲಿ ದ್ವೇಷಾಸೂಯಗಳು ನಿರ್ಮಿತವಾಗುತ್ತಿವೆ.

ಸದ್ಯದ ಧರ್ಮವೆಂದರೆ ಹಿಂದೂ, ಬೌದ್ಧ, ಕ್ರೈಸ್ತ, ಇಸ್ಲಾಮ, ಜೈನ, ಸಿಖ್ ವೆಂಬ ಸಾಮೂಹಿಕ ಮಾನವ ಸಮಾಜದ ಗುಂಪು ಅಥವಾ ಪರಂಪರಾಗತ ಸಾಂಪ್ರದಾಯ, ಕುಲ, ಜಾತಿ, ಮತ ಎಂದು ವಿವಿಧ ಕಲ್ಪನೆಗಳಿಂದ ಪರಿಗಣಿಸಲಾಗಿದೆ.

ಐತಿಹಾಸಿಕ ಸಮಾಲೋಚನೆಯಾಗಲು ಹಿಂದೂ, ಬೌದ್ಧ, ಕ್ರೈಸ್ತ ಇಸ್ಲಾಮ ಇತ್ಯಾದಿ ಸಾಂಪ್ರದಾಯಗಳು ಆಯಾಯ ದೇಶ, ಕಾಲ, ಪರಿಸ್ಥಿತಿಗನುಸಾರವಾಗಿ ಮಹಾನ್ ವಿಭೂತಿಗಳಿಂದ ಸ್ಥಾಪಿತವಾಗಿವೆ. ಅವುಗಳ ಭೂತ ಕಾಲವು ಮರ್ಯಾದಿತವಾಗಿರುವದೆಂಬುದಕ್ಕೆ ಇತಿಹಾಸವು ಪ್ರತ್ಯಕ್ಷ ಸಾಕ್ಷಿಯಾಗಿದೆ. ನಾಲ್ಕು ಸಾವಿರ ವರ್ಷಗಳ ತತ್ಪೂರ್ವದಲ್ಲಿ ಯಾವ ಮತ, ಪಂಥ, ಸಾಂಪ್ರದಾಯಗಳ ಅಸ್ತಿತ್ವವು ಇದ್ದಿಲ್ಲವೆಂಬುದು ಪ್ರತ್ಯಕ್ಷವಾಗಿರುವದು.

ಹಿಂದೂ, ಬೌದ್ಧ, ಕ್ರೈಸ್ತ, ಇಸ್ಲಾಮ, ಇವು ಮುಖ್ಯ ಪ್ರಭೇದಗಳಾಗಿದ್ದು ಅಂತರ್ಗತ ಪ್ರಭೇದಗಳೂ ಸಹ ಅನೇಕಾನೇಕ ರೀತಿಯವಾಗಿವೆ. ಈ ಅನೇಕಾನೇಕ ಪ್ರಭೇದಗಳಲ್ಲಿಯ ವೇಷ, ಭಾಷಾ,

ಪೂಜಾ, ವಿಚಾರ, ಆಚಾರ, ಉಚ್ಚಾರ ಕ್ರಮುಗಳಲ್ಲಿ ವಿವಿಧತೆಯಾಗಿದ್ದು ಅವುಗಳ ಸಂಸ್ಕಾರದ ಅನುಗುಣವಾಗಿ ಅವರವರ ಭಾವನೆಗಳಲ್ಲಿ ನಾನು ಹಿಂದೂ, ನಾನು ಕ್ರೈಸ್ತ, ನಾನು ಇಸ್ಲಾಮು, ನಾನು ಬೌದ್ಧ ನೆಂಬ ಭಾವನೆಯು ಪರಿಕಲ್ಪಿತವಾಗಿ ಅವರವರ ಸಾಂಪ್ರದಾಯವು ನೈಸರ್ಗಿಕ ಸ್ವರೂಪದಲ್ಲಿ ತೋರುತ್ತಿರುವದು.

ಪ್ರತಿಯೊಬ್ಬ ಸಾಂಪ್ರದಾಯಿಕನು ನನ್ನ ಧರ್ಮ, ನನ್ನ ಜಾತಿ, ಎಂಬ ಯಾವದೊಂದು ಭಾವದ ಸನ್ನಿವೇಶದಲ್ಲಿ ತನ್ನ ಜೀವಿತವು ಗ್ರಥಿತವಾಗಿರಿಸಿರುವನು. ಅವನ ಜನ್ಮದಾರಭ್ಯ ಬಂದ ಸಂಸ್ಕಾರವಲ್ಲಿ, ಅವನಿಗೆ ಶ್ರದ್ಧಾ, ಪ್ರೇಮುವು ಅತೀವವಾಗಿದ್ದು ಇನ್ನುಳಿದ ಮತ ಪಂಥಗಳ ಸಂಸ್ಕಾರದಲ್ಲಿ ವರ್ತಿಸುವ ಮಾನವ ಸಮಾಜಕ್ಕೆ ಅಶ್ರದ್ಧಾ ಅಪ್ರೇಮಿಯಾಗಿ ವರ್ತಿಸುವನು. ನಮ್ಮ ಸಾಂಪ್ರದಾಯ ನಮ್ಮ ಜಾತಿ ಬೇರೆ, ಇನ್ನುಳಿದ ಸಾಂಪ್ರದಾಯ, ಮತ, ಜಾತಿಗಳು ನಮಗೆ ಅಸಂಬಂಧ ವಾಗಿವೆಯೆಂದು, ಪರಸ್ಪರರು ತಿಳಿಯುತ್ತಾರೆ. ನಮ್ಮ ಜಾತಿ, ನಮ್ಮ ಮತವೇ ಶ್ರೇಷ್ಠವೆಂದು ಪ್ರತಿಯೊಬ್ಬರ ಕಲ್ಪನೆಯಾಗಿ ಇನ್ನುಳಿದ ಜಾತಿ ಮತಗಳಿಗೆ ಗೌಣವಾಗಿ ಕಲ್ಪಿಸಿ ವರ್ತಿಸುವರು. ಮತ್ತೆ ಸರ್ವಮತಾನುಯಾಯಿಗಳು ಸೃಷ್ಟಿಗೆ ಮೂಲ ಅನಾದ್ಯ (ಈಶ್ವರ) ವಸ್ತುವಿನ ಸಂಬಂಧಿಸಿ, ವಿವಿಧ ಕಲ್ಪನೆಗಳಲ್ಲಿ ಬೆರೆತು ಕೆಲವರು ಸಾಕಾರ ಕೆಲವರು ನಿರಾಕಾರ ಕೆಲವರು ಸಾಕಾರ ನಿರಾಕಾರ ವೆಂದು ಉಭಯುವಾದಿ ಗಳಾಗಿರುವರು. ಕೆಲವರು ನಿರೀಶ್ವರ ವಾದಿಗಳಾಗಿರುವರು. ಮೂಲ ಅನಾದ್ಯ (ಈಶ್ವರ)–ವಸ್ತುವಿನಲ್ಲಿ ಭಿನ್ನ ಭಿನ್ನ ಕಲ್ಪನೆಗಳಾಗಿ ಆ ಸೃಷ್ಟ್ಯಾದಿ ಮೂಲ ವಸ್ತುವಿನ ಪ್ರಾಪ್ತಿಗಾಗಿ ಅನೇಕ ವಿಧ ಮತ ಶಾಸ್ತ್ರಗಳು, ಸಿದ್ಧಾಂತಗಳು, ನಿರ್ಮಿತವಾಗಿವೆ ಆಯಾಯ ಮತಾನುಯಾಯಿಗಳು ತಮ್ಮ ಮತದಲ್ಲಿ ಶ್ರದ್ಧಾ-ಪ್ರೇಮ ಉಳ್ಳವರಿಗೆ ತಮ್ಮ ಮತ ಸಾಂಪ್ರದಾಯಿಕರೆಂದು ಪರಿಕಲ್ಪಿಸಿ ವೇಷ, ಭಾಷಾ, ಆಚಾರ, ವಿಚಾರ, ಉಚ್ಚಾರ ಕ್ರಮುಗಳಲ್ಲಿ ಪರಿವರ್ತನೆಗೊಳಿಸಿರುವರು. ಅದರಿಂದ ಅಖಂಡ ಮಾನವ ಸಮಾಜವು ಖಂಡ ಖಂಡಾಗಿ

ಐಹಿಕ ಜೀವನದ ಸುಖಶಾಂತಿಯ ಪೂರ್ತಿಗೆ ಅಸಮರ್ಥವಾಗಿದೆ. ಇದರಿಂದ ಕ್ರಮೇಣ ಜಾತ್ಯಾಂಧತೆ, ಮತಾಂಧತೆಯು ಬೆಳೆಯುತ್ತಿದೆ.

ಜಗತ್ತಿನ ಯಾವತ್ತು ರಾಷ್ಟ್ರಗಳು ಮತ, ಸಾಂಪ್ರದಾಯ, ಜಾತಿ ಇವುಗಳ ನಿರಪೇಕ್ಷವಾಗಿವೆಯೆಂದು ರಾಷ್ಟ್ರದ ಘಟನಾತ್ಮಕ ವಿಧಾನ ಗ್ರಂಥಗಳಲ್ಲಿ ಒಪ್ಪಿರುವದಾದರೂ ಬಹು ಸಂಖ್ಯಾಂಕ ಪ್ರಜರ ಸಾಮೂಹಿಕ ಶಕ್ತಿಯು ರಾಷ್ಟ್ರಾಧಿಪತ್ಯವನ್ನು ವಹಿಸಿರುವ ಕಾರಣ ಬಹುಜನರ ಭಾವ, ಮನ, ಕಾಯಗಳಿಗೆ ಯಾವ ಸಂಸ್ಕಾರವಾಗಿರುವದೋ ಅದೇ ಪ್ರಕಾರದ, ಅದೇ ವಿಚಾರದ ಭಾವನೆಗಳು ರಾಷ್ಟ್ರಕಾರ್ಯದಲ್ಲಿ ಉದಿಸಿ ಯಾವದೊಂದು ಮತ ಸಾಂಪ್ರದಾಯದ ಸಾಮೂಹಿಕ ಭಾವದ ಅನುಗುಣವಾಗಿ ವರ್ತಿಸುವದು ಪ್ರಜರಿಗೆ ಸ್ವಾಭಾವಿಕವಾಗಿರುವದು.

ಕ್ರೈಸ್ತ, ಇಸ್ಲಾಮ, ಬೌದ್ಧ, ಹಿಂದೂ ಈ ಸಾಂಪ್ರದಾಯಗಳಲ್ಲಿ ಯಾವ ಮತವು ಬಹು ಸಂಖ್ಯಾಂಕ ವಾಗಿರುವದೋ ಆ ಮತದ ಸಾಮಾಜಿಕ ಕ್ಷೇತ್ರದ ವಾತಾವರಣವು ಆ ರಾಷ್ಟ್ರದಲ್ಲಿ ವ್ಯಾಪಕವಾಗಿರುವದು.

ರಾಷ್ಟ್ರದ ಘಟನಾತ್ಮಕ ವಿಧಾನಗ್ರಂಥ (Constitution) ಗಳಲ್ಲಿ ರಾಷ್ಟ್ರವು ಮತ, ಜಾತಿ, ಸಂಪ್ರದಾಯಗಳಿಗೆ ನಿರಪೇಕ್ಷವಾಗಿರುವದೆಂದು, ಜಾತ್ಯಾತೀತ (Secular State) ವಾಗಿರುವದೆಂದು ಒಪ್ಪುತಿದ್ದಾಗ್ಯೂ, ರಾಷ್ಟ್ರದಲ್ಲಿಯ ಪ್ರಜರಿಗೆ ಅವರವರ ಮಾತೃ, ಪಿತೃ ಆಚಾರ್ಯರಿಂದ ಬಂದಿರುವ ಮತ ಜಾತಿಗಳ ಅನುವಂಶಿಕ ಸಂಸ್ಕಾರವು ಪ್ರಬಲವಾಗಿರುವ ಕಾರಣ "ಜಾತ್ಯಾತೀತ" "ಮತಾತೀತ" ವೆಂಬ ರಾಷ್ಟ್ರಘಟನೆಯ ಉದ್ದೇಶವು ಮಾನವ ಸಮಾಜದ ದೈನಂದಿನ ನಿತ್ಯ ಕಾರ್ಯಾಚರಣೆಯಲ್ಲೀ ಬರುವದು ಅಸಾಧ್ಯವಾಗಿದೆ.

ವಿವಿಧ ಮತಜಾತಿಗಳಲ್ಲಿ ಬೆಳೆದು ಬಂದಿರುವ ಜಾತ್ಯಾಂಧತೆಯು ಅಳಿದು ಹೋಗಿ ಪರಸ್ಪರರಲ್ಲಿಯ ಉಚ್ಚ ನೀಚ ಭಾವನೆಯು ನಿರ್ಮೂಲ-

ವಾಗಬೇಕೆಂಬ ಆಪೇಕ್ಷೆಯಲ್ಲಿ, ಎಲ್ಲ ಮತ ಜಾತಿಗಳು ಸಾಮೂಹಿಕ ಸ್ವರೂಪದಲ್ಲಿ ಖಾದ್ಯ ಪೇಯ ( ಉಣ್ಣುವ, ಕುಡಿಯುವ ) ಗಳು ಸೇವಿಸಿದರೂ ಅವರವರ ಭಾವದಲ್ಲಿಯ ಪ್ರೇರಿತ ಅನುವಂಶಿಕ ಸಂಸ್ಕಾರ ರೂಪವಾಗಿ ಅನೇಕ ಶತಮಾನಗಳಿಂದ ಬಂದಿರುವ ಜಾತ್ಯಾಂಧತೆಯು ಅಳಿಯುವದಿಲ್ಲ.

ಆಧುನಿಕ ಕಾಲದಲ್ಲಿ ಪ್ರಯಾಣಕ್ಕಾಗಿ ವಾಹನದ ಸೌಕರ್ಯವು ವಿಪುಲವಾಗಿದೆ ಆಯಾತ್-ನಿರ್ಯಾತ್ ಸಾಧನೆಗಳು ಅತಿ ಸುಲಭವಾದ್ದರಿಂದ ಅತಿ ದೂರದ ಪ್ರಯಾಣವು ಅತ್ಯಂತ ಸುಗಮವಾಗಿರುವ ಕಾರಣ ಜಾತಿ, ಮತ ಪಂಥ ಭಾವನೆಯಿಂದ ಖಾದ್ಯ ಪೇಯ ( ತಿನ್ನುವ, ಕುಡಿಯುವ ) ಪದಾರ್ಥಗಳನ್ನು ಸ್ಪರ್ಶ, ಅಸ್ಪರ್ಶ ಭಾವದಲ್ಲಿ ಉಪಯೋಗಿಸುವದು ಮಾನವನಿಗೆ ಸಾಧ್ಯವಿಲ್ಲ.

ಅರ್ಥಾತ್ : ಯಾವ ಜಾತಿ, ಮತ, ಪಂಥದವನಾದರೂ ಖಾದ್ಯ ಪೇಯ ಪದಾರ್ಥಗಳನ್ನು ಭಿನ್ನ ಭಿನ್ನ ಜಾತಿ, ಮತ, ಪಂಥ, ಸಾಂಪ್ರದಾಯಕರೊಂದಿಗೆ ಸೇವಿಸುತಿದ್ದಾಗ್ಯೂ, ನಾನು ಹಿಂದೂ, ನಾನು ಕ್ರೈಸ್ತ, ನಾನು ಬೌದ್ಧ, ನಾನು ಇಸ್ಲಾಮ್, ಎಂಬ ಜಾತ್ಯಾಂಧತೆಯ ಭಾವನೆಯು ನಿರ್ಮೂಲವಾಗುವದು ಸಾಧ್ಯವಿಲ್ಲ.

ಮತ ಪಂಥ ಸಾಂಪ್ರದಾಯಗಳು ರಾಷ್ಟ್ರದ ಉನ್ನತಿಗೆ ಬಾಧಕವಾಗಿವೆಯೆಂದು ಕಲ್ಪಿಸಿ, ರಾಷ್ಟ್ರಕ್ಕೂ, ಮತ ಪಂಥ ಸಾಂಪ್ರದಾಯಕ್ಕೂ ಯಾವ ವಿಧವಾದ ಸಂಬಂಧವು ಬೇಡವೆಂದು ಭಾರತೀಯ ರಾಜ್ಯ ಘಟನೆಯಲ್ಲಿ ಜಾತ್ಯಾತೀತ ರಾಷ್ಟ್ರ ( Secular State ) ವೆಂದು ಒಪ್ಪಿರುವದು.

ವಸ್ತು ಸ್ಥಿತಿಯ ವಿಚಾರವಾಗಲು ಹಿಂದೂ, ಬೌದ್ಧ, ಕ್ರೈಸ್ತ, ಇಸ್ಲಾಮ್ ಇವು ಸೃಷ್ಟಿಯ ಕಾಲ ಪ್ರವಾಹದ

ವಾತಾವರಣದಲ್ಲಿ ದೇಶ ಕಾಲ ಪರಸ್ಥಿತಿಗನುಸಾರವಾಗಿ ಮಾನವ ನಿರ್ಮಿತವಾಗಿವೆ. ಇಂತಹ ಕಲ್ಪಿತ ಜಾತಿಗಳು ಅನೇಕಾನೇಕ ವಾಗಿ ಉದಿಸಬಹುದು. ಅಥವಾ ವಿಲೋಪವಾಗಬಹುದು.

ಸೃಷ್ಟಿಯಲ್ಲಿ ಪಶು-ಪಕ್ಷಿ, ಕ್ರಿಮಿ ಕೀಟಕ ಇವು ಒಂದೊಂದು ಜಾತಿಗಳಾಗಿರುವಂತೆ, "ಮಾನವ" ವೆಂಬುದೊಂದು ಜಾತಿಯಾಗಿದೆ. ಪಶು ಪಕ್ಷ್ಯಾದಿ ಚೇತನಾತ್ಮಕ ಜಾತಿಗಳಲ್ಲಿ "ಮಾನವ" ಜಾತಿಯೇ ಅಗ್ರಣಿಯಾಗಿರುವದು. ಎಲ್ಲ ಮಾನವರಲ್ಲಿ, ಆಹಾರ, ನಿದ್ರಾ, ಭಯ, ಮೈಥುನಾದಿಕ ಕ್ರಿಯೆಗಳು ಒಂದೇಯಾಗಿವೆ. ಪೃಥ್ವಿ, ಆಪ್, ತೇಜ, ವಾಯು, ಆಕಾಶ ಈ ಪಂಚ ತತ್ವಗಳು; ಸೂರ್ಯ, ಚಂದ್ರ, ನಕ್ಷತ್ರಾದಿ-ಗ್ರಹಗಳು ಅಖಿಲ ಮಾನವ ಕುಲಕ್ಕೆ ಒಂದೇ ವಿಧವಾಗಿ ಸಂರಕ್ಷಿಸುತ್ತವೆ. ಯಾವ ದೇಶದ ಮಾನವನಾದರೂ ಪ್ರಕೃತಿಮಾತೆಯಿಂದ ಒಂದೇ ವಿಧ-ವಾಗಿ ಸಂರಕ್ಷಿಸಲ್ಪಡುತ್ತಿರುವನು. ಆದರಿಂದ ಹಿಂದೂ, ಬೌದ್ಧ, ಕ್ರೈಸ್ತ, ಇಸ್ಲಾಮ್ ಇವು ಪರಿಕಲ್ಪಿತ ಜಾತಿಗಳೇ ಹೊರತು ನಿಜ-ವಾದ ಜಾತಿಗಳಲ್ಲ. ನಿಜವಾದ ಜಾತಿ ಎಂದರೆ "ಮಾನವ" ವೆಂಬುದು ಒಂದೇ ಒಂದಾಗಿರುವದು.

ಮಾನವ ಜಾತಿಯಲ್ಲಿ ಸ್ತ್ರೀ-ಪುರುಷವೆಂಬ ಎರಡು ಭಾಗಗಳು ಕೆಲವರು ಸ್ತ್ರೀ-ಮತ್ತು ಪುರುಷ ಇವು ಎರಡು ಜಾತಿಗಳೆಂದು ಕಲ್ಪಿಸಬ-ಹುದು. ಆದರೆ ಅವು ಎರಡು ಸ್ವತಂತ್ರ ಜಾತಿಗಳಲ್ಲ. ಸ್ತ್ರೀ ಪುರುಷ ಇವರೀರ್ವರಿಗೆ "ಮಾನವ" ಎಂಬ ಸಂಜ್ಞೆಯುಂಟಾಗಿದೆ. ಮಾನವ ಜಾತಿಯಲ್ಲಿ ಸ್ತ್ರೀ-ಪುರುಷ ವೆಂಬ ಎರಡು ಭಾಗಗಳುಂಟು.

ಉದಾ : ವನಸ್ಪತಿ ಶಾಸ್ತ್ರದಲ್ಲಿ ಕಡಲೆ, ನೆಲಗಡಲೆ, ಉದ್ದು, ಹೆಸರು ಮುಂತಾದ ಧಾನ್ಯಗಳು ಎರಡು ದಳಗಳಿಂದ ಕೂಡಿವೆ. ಆ ಎ-ರಡು ದಳಗಳು ವಿಭಕ್ತವಾಗಿ ( ವಿಂಗಡಿಸಿ ) ಭೂಮಿಯಲ್ಲಿ ಬಿತ್ತಲು ಅವು ಅಂಕುರಿಸುವದಿಲ್ಲ. ಉತ್ಪತ್ತಿಯ ಕಾರ್ಯಕ್ಷಮತೆಯು ಅವುಗಳಲ್ಲಿ ಕಾಣ-

ಬೇಕಾದರೆ, ಆವೆರಡೂ ದಳಗಳು ಅವಿಭಕ್ತ ( ಅಖಂಡ ) ವಾಗಿ; ಅವಿ. ಭಾಜ್ಯವಾಗಿ, ತಾದಾತ್ಮ್ಯ ಸ್ವರೂಪದಾಗಿದರೂ, ಆವರಣ ( ಹೊದಿಕೆ ) ವೇಷ್ಟಿತವಾಗಿರಬೇಕಾಗುತ್ತದೆ.

ವನಸ್ಪತಿಯ ಬೀಜಗಳು ಅಚೇತನವಾದರಿಂದ ಸ್ವಯಂಚೇತನೆ. ಗೊಳ್ಳಲಾರವು. ಆದರೆ ಅವುಗಳಲ್ಲಿ ಪರಾಚೇತನ ಧರ್ಮವಿದ್ದುದರಿಂದ ಸ್ವಯಂಚೇತನ ಮಾನವನು, ಆ ದ್ವಿದಳ ಧಾನ್ಯಗಳಿಗೆ ವಿಭಕ್ತಗೊಳಿಸಿ, ಉಪಭೋಗಗೊಳ್ಳುತ್ತಾನೆ.

ಮಾನವನು ಸ್ವಯಂ ಚೇತನೆಯಾದರಿಂದ ಸ್ತ್ರೀ–ಪುರುಷ ವೆಂಬೀ ದಳಗಳು ವಿಭಕ್ತವಾಗಿ ( ಬೇರೆಯಾಗಿ ) ಸಂಚರಿಸಿ, ತಮ್ಮ ಕರ್ಮಯೋಗ ಪ್ರಪಂಚವನ್ನು ಹಗಲಿರಳು ಸಾಗಿಸುತ್ತಿವೆ.

ಪುರುಷನ ಅರ್ಧಾಂಗಿ ಸ್ತ್ರೀಯು ಸ್ತ್ರೀಯಳ ಅರ್ಧಾಂಗ ಪುರುಷನು ಎರಡೂ ಅರ್ಧಾಂಗಗಳು ಕರ್ಮಯೋಗ ಪ್ರಪಂಚ- ದಲ್ಲಿ ಸ್ವಯಂಚರವಾಗಿವೆ. ಆದಾಗ್ಯೂ ಪ್ರೇಮಾತಿಶಯದಲ್ಲಿ ಸ್ತ್ರೀ- ಪುರುಷರ ಎರಡೂ ಅರ್ಧಾಂಗಗಳು ಸಮೀಕರಣವಾಗದ ವಿನಃ ಸಂತಾನೋತ್ಪತ್ತಿಯ ಕಾರ್ಯಕ್ಷಮತೆಯಲ್ಲಿ ಸಮರ್ಥವಾಗಲಾರವು. ಸಾಮಾನ್ಯ ಪ್ರೇಮದಲ್ಲಿ, ಸ್ತ್ರೀ–ಪುರುಷರು ವಿಭಕ್ತವಾಗಿ ಸ್ವತಂತ್ರ- ವಾಗಿದ್ದರೂ ಸಂತಾನೋತ್ಪತ್ತಿಯ ಕ್ರಮದಲ್ಲಿ ಎರಡೂ ಅರ್ಧಾಂ. ಗಗಳು ಪ್ರೇಮಾತಿಶಯದ ಆವರಣ ವೇಷ್ಟಿತವಾಗಿ ಅವಿಭಕ್ತ ತಾದಾತ್ಮ್ಯ ಸ್ವರೂಪದಲ್ಲಿ ವರ್ತಿಸುತ್ತಿವೆ.

ಸಾರಾಂಶ: "ಮಾನವ್ಯ ಜಾತಿ ಎಂಬುದು ಒಂದೇಯಾ- ಗಿದ್ದು, ಸಕಲ ಮಾನವರಿಗೆ ಧರ್ಮವೂ ಒಂದೇ ಒಂದಾಗಿರುವದು.

ಒಂದು ಪಕ್ಷ ರಾಷ್ಟ್ರವು ಹಿಂದೂ, ಬೌದ್ಧ, ಕ್ರೈಸ್ತ, ಇಸ್ಲಾಮ ಈ ಜಾತಿಗಳ ನಿರಪೇಕ್ಷ ( Secular State ) ವೆಂದು ಗ್ರಹಿತವಾದದ್ದಾ-

ದರೆ, ಇದರಿಂದ ಆ ಮತ ಜಾತಿಗಳಲ್ಲಿ ಶ್ರದ್ಧಾ ಭಕ್ತಿಯು ಕಡಿಮೆಯಾಗಿ ಮಾನವನು ನಾಸ್ತಿಕ ಅಂದರೆ, ಸ್ವೇಚ್ಛಾಚಾರಿ ಅಪ್ರೇಮಿಯಾಗಿ ವರ್ತಿಸುವನೇ ಹೊರತು ಬೇರೊಂದಿಲ್ಲ.

ಶ್ರದ್ಧಾ, ಭಕ್ತಿ, ಪ್ರೇಮವು ಮಾನವನ ಜನ್ಮಸಿದ್ಧ ಪ್ರವೃತ್ತಿಯಾಗಿದೆ. ವೈಯಕ್ತಿಕ ಜೀವನದಲ್ಲಿ ನನ್ನ ತಾಯಿ, ನನ್ನ ತಂದೆ, ನನ್ನ ಹೆಂಡತಿ,-ಮಕ್ಕಳು, ನನ್ನ ಬಂಧು ಬಾಂಧವರೆಂದು ಶ್ರದ್ಧಾ ಪ್ರೇಮ ಭಾವದಲ್ಲಿಯೇ ಕಾಣುತ್ತಾನೆ. ವೈಯಕ್ತಿಕ ಜೀವನ ಸುಖ-ಶಾಂತಿಗೆ ಶ್ರದ್ಧಾ ಪ್ರೇಮವು ಅವಶ್ಯಕವಾಗಿದೆ. ಅಶ್ರದ್ಧೆ, ಅಪ್ರೇಮವಾದರೆ ಪ್ರೀಯ ವಸ್ತುಗಳನ್ನು ಅಪ್ರೀಯವಾಗಿ ಕಂಡು ದುಃಖಿತನಾಗುತ್ತಾನೆ. ಅದರಂತೆಯೇ ರಾಷ್ಟ್ರದ ವ್ಯಾಪಕ ಸುಖ-ಶಾಂತಿಗೆ ನನ್ನ ಊರು, ನನ್ನ ದೇಶ, ನನ್ನ ರಾಷ್ಟ್ರವೆಂಬ ಶ್ರದ್ಧಾ ಪ್ರೇಮವು ಅತೀವವಾಗಿ ಬೇಕು. ಪ್ರೇಮದ ಅಭಾವವಾಗಲು ರಾಷ್ಟ್ರದಲ್ಲಿ ಅಶಾಂತತೆಯಾಗುವ ಪ್ರಯುಕ್ತ ವ್ಯಾಪಕ ಪ್ರೇಮವನ್ನು ಉತ್ಪಾದನಗೊಳಿಸುವದಕ್ಕೆ "ಮಾನವ ಧರ್ಮ" ದ ಶಿಕ್ಷಣವು ಬೇಕು. ಅದರ ವಿನಃ ಜಗತ್ತಿನ ಶಾಂತಿ ಸ್ಥಾಪನ ಕಾರ್ಯವು ಸಾಧ್ಯವಿಲ್ಲ.

ಜಗತ್ತಿನಲ್ಲಿ ನಿಜವಾದ ಧರ್ಮ ಜ್ಞಾನವು ನಷ್ಟವಾದರಿಂದ ಧರ್ಮದಲ್ಲಿ ಕೆಲವರಿಗೆ ಅಶ್ರದ್ಧೆ ಅಪ್ರೇಮವಾಗಿದೆ. ಕೆಲವರಿಗೆ ಜಾತ್ಯಾಂಧತೆಯು ಬೆಳೆದು ಪರಸ್ಪರ ಮಾನವ ಸಮಾಜದಲ್ಲಿ ದ್ವೇಷಾಸೂಯಗಳ ಮೂಲಕ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ದುಷ್ಟ ಪ್ರಮಾದಗಳಿಂದ ಒಂದು ವ್ಯಕ್ತಿಯು ಮತ್ತೊಂದು ವ್ಯಕ್ತಿಗೆ, ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರಕ್ಕೆ ಶತೃಭಾವದಲ್ಲಿ ಕಂಡು ಜಗತ್ತಿನ ಸಂಹಾರ ಕ್ರಮದಲ್ಲಿ ವರ್ತಿಸುತ್ತಿದೆ.

ಧರ್ಮವು ಮಾನವನ ಸ್ವಭಾವ ಸಿದ್ಧ ಪ್ರವೃತ್ತಿಯಾಗಿದೆ ಅದು ಯಾರಿಂದ ನಿರ್ಮಿತವಾದುದಲ್ಲ. ಸ್ಥಾಪಿತವಾದುದಲ್ಲ.

ಮಾನವನು ಧರ್ಮದಲ್ಲಿಯೇ ಹುಟ್ಟಿ, ಧರ್ಮದಲ್ಲಿಯೇ ಬೆಳೆದು, ಧರ್ಮ-ದಲ್ಲಿಯೇ ಅವನ ಪರಿಸಮಾಪ್ತಿ ಯಾಗುತ್ತಿರುವದರಿಂದ, ಧರ್ಮವು ಮಾನವನ ಜೀವನಕ್ಕೆ ಸದಾ ಆಶ್ರಿತವಾಗಿರುತ್ತದೆ.

ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಸಿದ್ಧಾಂತ ಶಿಖಾ-ಮಣಿ ಎಂಬ ಮೂಲ ಸಂಸ್ಕೃತ ಗ್ರಂಥದಲ್ಲಿ ಶ್ರೀ ಅಗಸ್ತ್ಯ ಮಹಾ ಮುನಿಗಳಿಗೆ ಮಾನವ ಧರ್ಮದ ಉಪದೇಶ ಮಾಡಿರುವರು.

"ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ" ॥

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜಾ, ಜಪ ಮತ್ತು ಧ್ಯಾನ ಈ ಹತ್ತು ನಿಯಮಗಳಿಗೆ ಧರ್ಮ-ವೆಂದು ಅಪ್ಪಣೆ ಕೊಡಿಸಿರುವರು. ಈ ದಶ ನಿಯಮಗಳು ಮಾನವನಲ್ಲಿ ಜನ್ಮಸಿದ್ಧ ನೈಸರ್ಗಿಕ ಪ್ರವೃತ್ತಿಯಾಗಿವೆ. ಅವುಗಳು ಭಿನ್ನ ಜೀವಿಗಳಲ್ಲಿ ಭಿನ್ನಾವಸ್ಥೆಯಲ್ಲಿ, ಉಪಯೋಗಿಸಲ್ಪಡುವದಕ್ಕೆ "ಧರ್ಮಸಂಗ್ರಹ" ಅಥವಾ "ಧರ್ಮಾಚಾರ" ವೆನ್ನುತ್ತಾರೆ.

ಯಾವ ಭಾಷೆ, ಯಾವ ವೇಷ, ಯಾವ ದೇಶದ ಮಾನವನಾ-ದರೂ ಅವರೆಲ್ಲರಿಗೆ ಧರ್ಮವು ಒಂದೇ. ವೇಷ, ಭಾಷಾ, ದೇಶಗಳ ಭಿನ್ನತೆಯ ಮೂಲಕ ಧರ್ಮವು ಭಿನ್ನವಾಗುವದಿಲ್ಲ.

ಉದಾ : ಗಣಿತ ಶಾಸ್ತ್ರದ ಪ್ರಮೇಯವು ಯಾವ ಭಾಷೆಯ-ದಾದರೂ ಅದರ ಪ್ರಯೋಗದಲ್ಲಿ ಒಂದೇ ಒಂದಾಗಿರುವದು. ಭಾಷಾ ಭೇದ ಮೂಲಕ ಗಣಿತ ಶಾಸ್ತ್ರದ ಉಚ್ಚಾರ ಕ್ರಮದಲ್ಲಿ ವಿವಿಧತೆಯಾಗಿರು-ವದೆಂದು ಫಲಿತಾಂಶದಲ್ಲಿ ಭಿನ್ನತೆಯು ಇಲ್ಲದಿರುವಂತೆ, ಧರ್ಮವು ಸರ್ವ ಮಾನವರಿಗೆ ಒಂದೇ ಒಂದಾಗಿರುವದು.

ಅಖಿಲ ಮಾನವ ಜಾತಿಯು ಒಂದೇ ಇಹಲೋಕ, ಪರಲೋಕ, ಪಾರಮಾರ್ಥ ಈ ಯಾವ ಸುಖಕ್ಕೂ ಕಾರಣವಾದದ್ದು ಧರ್ಮವು ಒಂದೇ ಒಂದಾಗಿದೆ ಎಂಬ ಮಾನವ ಧರ್ಮ ಸಾಹಿತ್ಯವು ಬೇಕು. ಮತ್ತೆ ಅದರೊಡನೆ ಮಾನವ ಧರ್ಮದ ಶಿಕ್ಷಣಕೊಡುವ ಧರ್ಮ ಪೀಠಗಳು, ಧರ್ಮಾಚಾರ್ಯರು ಅನಿವಾರ್ಯ ಅವಶ್ಯಕವಾಗಿ ಬೇಕಾಗಿರುವರು.

ಧರ್ಮದ ವಿನಃ ರಾಷ್ಟ್ರದ ಅಭಿವೃದ್ಧಿ ಯಾಗಲಾರದೆಂದು ಈ ಗ್ರಂಥದಲ್ಲಿ ಸಿದ್ಧಪಡಿಸಲಾಗಿದೆ. "ಮಾನವ ಧರ್ಮ" ಸಾಹಿತ್ಯ ಗ್ರಂಥಗಳು ಅತ್ಯಾವಶ್ಯಕವೆಂದು ತಿಳಿದು "ಧರ್ಮ ಮತ್ತು ರಾಷ್ಟ್ರ"ವೆಂಬೀ ಗ್ರಂಥವನ್ನು ಬರೆಯಲ್ಪಟ್ಟದೆ. ಮತ್ತೆ "ಧರ್ಮ ಶಾಸ್ತ್ರ"ವೆಂಬ ಗ್ರಂಥವನ್ನು ಬಹು ವಿಷದವಾಗಿ ಬರೆಯಲ್ಪಟ್ಟದೆ. ಅದೂ ಕೂಡ ಕೆಲ ದಿನಗಳಲ್ಲಿಯೇ ವಾಚಕ ಮಹಸಿಯರ ಸೇವೆಯಲ್ಲಿ ಸಲ್ಲಿಸಲಾಗುವದು.

ಇಡೀ ಮಾನವ ಕುಲಕ್ಕೆ ಧರ್ಮವು ಒಂದೇ, ಅದರ ಪ್ರಯೋಜನ, ಪ್ರಮೇಯ, ಪ್ರಯೋಗಗಳು ಒಂದೇ ಒಂದಾಗಿವೆ ಎಂದು ಪೂಜ್ಯ ಪಿತಾಜಿ ವೇ|| ಸಿದ್ಧವೀರ ಸ್ವಾಮಿ ಬನಹಟ್ಟಿಯವರು ಅವಿಶ್ರಾಂತವಾಗಿ ಯಾವಜ್ಜೀವನ ಪುರ ಪಟ್ಟಣಗಳಲ್ಲಿ ಸಂಚರಿಸಿ ಉಪದೇಶಿಸುವರು. ಅವರ ಈ ಮಹಾನ್ ಧ್ಯೇಯವು ಸಾಹಿತ್ಯ ಮೂರ್ತಿಯ ರೂಪದಲ್ಲಿ ಅವತೀರ್ಣವಾಗಿ ಸೂರ್ಯ, ಚಂದ್ರರ ಪ್ರಕಾಶದಂತೆ ಜಗತ್ತಿನ ಯಾವ ಜ್ಜೀವಿಗಳ ಭಾವಕ್ಕೆ ಸನ್ಮಾರ್ಗ ದರ್ಶನವನ್ನೀಯಲಿ, ಜಾತ್ಯಾಂಧತೆಯು, ಮತಾಂಧತೆಯು ಅಳಿಯಲೆಂಬ ಸದುದ್ದೇಶ ಪರವಾಗಿ ಈ ಗ್ರಂಥ ರಚನೆಯ ಪೂರ್ತಿಗೆ ಅವರ ಕೃಪಾಶೀರ್ವಾದವೇ ಕಾರಣವಾಗಿರುತ್ತದೆ.

ಶ್ರೀ ಷ. ಬ್ರ. ರಾಚೋಟಿ ಶಿವಾಚಾರ್ಯರು ಚರ ಪಟ್ಟಾಧಿಪತಿ ಕಟ್ಟೀಮನಿ ಸಂಸ್ಥಾನ ಹಿರೇಮಠ ಮೆಹಕರ ಜಿಲ್ಲಾ ಬೀದರ ಅವರು ಈ ಗ್ರಂಥದ ಲೇಖನ ಕಾರ್ಯಕ್ಕೆ ಅವಿಶ್ರಾಂತವಾಗಿ ಶ್ರಮಿಸಿ ಸಾಹಿತ್ಯ ಮೂರ್ತಿಯ ಸೌಂದರ್ಯವನ್ನು ಹೆಚ್ಚಿಸುವದರಲ್ಲಿ ಅತ್ಯಂತ ಕಷ್ಟ ಪಟ್ಟಿದ್ದಾರೆ. ಅವರ ಸಹ ಯೋಗವು ಎನಗೆ ದೊರೆಯದಿದ್ದಲ್ಲಿ ಈ ಸಾಹಿತ್ಯ ಮೂರ್ತಿಯ ಕಾರ್ಯವು ಪೂರ್ತಿಯಾಗುವದು ಸಾಧ್ಯವಾಗುತ್ತಿರಲಿಲ್ಲ. ಇದರ ಪ್ರಕಾಶನೆಗೆ ತನು, ಮನ, ಧನಗಳ ಅಪೌಲ್ಯಾಶ್ರಯವು ನೀಡಿದುದಕ್ಕೆ ಅವರ ದಿವ್ಯ ಸನ್ನಿಧಾನದಲ್ಲಿ ಅನನ್ಯ ಭಾವ ಭಕ್ತಿಯಿಂದ ಅನಂತಾನಂತ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

## ಜಿಲ್ಹಾ ಕಲಬುರ್ಗಿಯ :

ಶ್ರೀ ಶರಣಬಸವೇಶ್ವರ ಸಂಸ್ಥಾನದ ತ್ರಿಕಾಲ ಲಿಂಗ ಪೂಜಾನುಷ್ಠಾನ ತತ್ಪರರಾದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರ ಸುಪುತ್ರರಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾ, ಎಂ. ಎ., ಅವರು ನಮ್ಮ ಬೇಡಿಕೆಗೆ ಮನ್ನಿಸಿ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದುದಕ್ಕಾಗಿ ನಾವು ಅವರಲ್ಲಿ ಪ್ರೇಮಾದರಪೂರ್ವಕ ಅತ್ಯಾನಂದವನ್ನು ವ್ಯಕ್ತ ಗೊಳಿಸುತ್ತೇವೆ.

ಈ ಗ್ರಂಥ ಪ್ರಕಾಶನೆಗೆ ಸಹಾಯ ನೀಡಿದ ಶ್ರೀಮಾನ್ ಸಿದ್ಧನಾಥ ಮಾಲೀಗೌಡರು ಅರಣಕಲ್ ಅವರಿಗೆ ಸಕಲೈಶ್ವರ್ಯ ಉಂಟಾಗಲೆಂದು ಆಶೀರ್ವಾದಿಸುತ್ತೇವೆ.

ಅಖಂಡ ಗುರು ಸೇವಾ ನಿರತರಾದ ಶ್ರೀ ಚನ್ನಬಸಪ್ಪ ಪಟ್ಟಣೆ ಚಿಂಚೋಳಿ ಮುಂ. ಡೋಣಗೋಪೂರ ಅವರು ಈ ಕಾರ್ಯದಲ್ಲಿ ನಾನಾವಿಧ ಸೇವೆ ಸಲ್ಲಿಸಿದುದಕ್ಕೆ ಅನಂತ ಶುಭಾಶೀರ್ವಾದಗಳು.

ಈ ಗ್ರಂಥ ಪ್ರಕಾಶನೆಯ ಕಾರ್ಯದಲ್ಲಿ ನಾನಾ ವಿಧ ಕಷ್ಟ ನಷ್ಟ ಗಳನ್ನು ಸಹಿಸುತ್ತ ಸೇವೆ ಸಲ್ಲಿಸಿದ ಶ್ರೀ ವೈಜನಾಥ ಪಿ ಶಾ ಸಂಗಪ್ಪಾ ತವಡೆ, ಬಿ. ಎ., (ತೃತಿಯ) ಡೋಣಗೋಪೂರ ಜಿಲ್ಹಾ ಬೀದರ ಅವರಿಗೆ ಅನಂತ ಶುಭಾಶೀರ್ವಾದಗಳು.

ಕಲಬುರಗಿಯ :

ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್ಸಿನ ಸ್ವಾಮಿಗಳಾದ ಶ್ರೀ ವೇ. ವೀರಭದ್ರಯ್ಯನವರು ಬಿ. ಎ., ಹಾ ಗೂ ಅವರ ಸಹೋದರರಾದ ಶ್ರೀ ವೇ. ಚಂದ್ರಶೇಖರಯ್ಯನವರು ಹಡಗಲಿಮಠ ಈ ಉಭಯರು ನಮ್ಮ ಗ್ರಂಥ ಮುದ್ರಣ ಕಾರ್ಯವನ್ನು ಪ್ರೇಮಾದರ ಭಾವದಲ್ಲಿ ಒಳ್ಳೇ ದಕ್ಷತೆಯಿಂದ ಪೂರ್ತಿಗೊಳಿಸಿದುದಕ್ಕೆ ಅತ್ಯಾನಂದವನ್ನು ಅಭಿವ್ಯಕ್ತಗೊ-ಳಿಸುತ್ತೇವೆ.

ಗ್ರಂಥಕರ್ತಾ

ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಅಗಸ್ತ್ಯ ಮಹಾ ಮುನಿಗಳಿಗೆ
ಮಾನವ ಧರ್ಮವನ್ನು ಉಪದೇಶಿಸುತ್ತಾರೆ.





ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥



ವೇ॥ ಸಿದ್ಧವೀರ ಸ್ವಾಮಿ ಬನಹಟ್ಟಿಯವರು
ಮು॥ ತಡೊಳಗಿ (ರಾಜೇಶ್ವರ) ಜಿ. ಬೀದರ.

§ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು §

# ಧರ್ಮ ಮತ್ತು ರಾಷ್ಟ್ರ

ನಮ್ಮೀ ಸೃಷ್ಟಿಯಲ್ಲಿ ಮನುಷ್ಯ, ಪಶು, ಪಕ್ಷಿ, ಕ್ರಿಮಿಕೀಟಕ ಪತಂಗಾದಿ ಚೇತನಾತ್ಮಕ ಸಜೀವ ಪರಮಾಣುಗಳು ಮತ್ತು ಪೃಥ್ವಿ, ಆಪ್, ತೇಜ, ವಾಯು, ವನಸ್ಪತ್ಯಾದಿ ಅಚೇತನ ಪರಮಾಣುಗಳು ಎರಡು ವಿಧವಾಗಿವೆ. ಅಚೇತನ ಪರಮಾಣುಗಳಲ್ಲಿ ಮನ ಬುದ್ಧ್ಯಾದಿ ಜ್ಞಾನಕಣಗಳು ಅಪ್ರಕಟವಾಗಿರುವದರಿಂದ ಅವು ತಮ್ಮ ಸುಖ ಸಮೃದ್ಧಿಯಲ್ಲಿ ಭಿನ್ನ-ಜೀವಿ, ಭಿನ್ನ ಪದಾರ್ಥಗಳ ಸಹಯೋಗ ಪಡೆಯುವ ಸಾಪೇಕ್ಷ ಧರ್ಮವು ಪ್ರತ್ಯಕ್ಷವಾಗಿರುವದಿಲ್ಲ. ಮಾತ್ರ ಚೇತನಾತ್ಮಕ ಜೀವರುಗಳಿಗೆ ತಮ್ಮ ಸುಖ ಸಮೃದ್ಧಿಯಲ್ಲಿ ಏಕಾಂಗಿಯಾಗಿರದೆ ಅನ್ಯ ಜೀವರುಗಳ ಸಹಯೋಗ ಪಡೆಯುವ ಸಾಪೇಕ್ಷ ಧರ್ಮವು ಪ್ರತ್ಯಕ್ಷವಾಗಿದೆ.

ಕ್ರಿಮಿಕೀಟಕಗಳಲ್ಲಿ ಗಣ್ಯವಾದ ಚಿಕ್ಕಾಡಿ, ದ್ವಾಮೆ, ನೊಣ, ಜೇನುನೊಣ, ಇರುವೆ ಮೊದಲಾದವು ಗುಂಪುಗುಂಪಾಗಿಯೇ ಸಾಂಘಿಕ ರೂಪದಲ್ಲಿ ವಾಸಿಸಿ ವರ್ತಿಸುತ್ತವೆ.

ಕಾಗೆ, ಗುಬ್ಬಿ, ಗಿಣಿ ಮೊದಲಾದ ಪಕ್ಷಿಗಳು ರಾತ್ರಿಕಾಲ
ಗುಂಪುಗುಂಪಾಗಿಯೇ ವೃಕ್ಷ ಉದ್ಯಾನ ವನಪ್ರದೇಶಗಳಲ್ಲಿ ವಾಸಿಸುತ್ತ
ತಮ್ಮ ದೈನಿಕ ಕಾರ್ಯವಾದ ಆಹಾರ ವಿಹಾರ ಪ್ರಾಪ್ತಗೊಳಿಸು
ಏಕಾಂಗಿಯಾಗಿ ವರ್ತಿಸದೆ, ಬಹು ಸಂಖ್ಯಾಂಕವಾಗಿ ಸಾಂಘಿಕ ರೂ
ದಲ್ಲಿ ಸಂಚರಿಸುತ್ತವೆ.

ಚಿಗರೆ, ಆನೆ, ಒಂಟೆ, ವನಚರಗೋವು, ಕಾಡು ಹಂ
ಮುಂಗ ಮೊದಲಾದ ಪಶುಗಳು ತಮ್ಮ ತಮ್ಮ ಸಜಾತೀಯರಲ್ಲಿ ಸಾಮೂ
ಹಿಕ ಸಂಘರೂಪದಾಗಿ ವಾಸಿಸಿ ವನದಲ್ಲಿ ಸಂಚರಿಸುತ್ತವೆ.

ಹುಲಿ, ಕರಡಿ, ಸಿಂಹ ಮೊದಲಾದ ಹಿಂಸ್ರ ಪಶುಗಳು ಅನ್ಯ
ರು ತಮಗೆ ಹಿಂಸಿಸಬಾರದೆಂಬ ಭೀತಿಗಾಗಿ ಗಿರಿ ಗುಹ್ಯ ಘೋರಾರಣ್ಯ
ದಲ್ಲಿ ಹಿಂಡು ಹಿಂಡಾಗಿ ಸಾಂಘಿಕ ರೂಪದಲ್ಲಿ ಸಂಚರಿಸುತ್ತವೆ.

ಎಲ್ಲ ಪ್ರಾಣಿಗಳಲ್ಲಿ ಜ್ಞಾನದಿಂದ ಅಗ್ರೇಸರನಾದ ಮಾನವ
ಜನ್ಮದಾರಭ್ಯ ಮರಣಾಂತ್ಯದವರೆಗೆ ಸಾಂಘಿಕ ಜೀವನದಲ್ಲಿ ಚರಿಸದ ವಿ
ತನ್ನ ಸುಖ ಸಮೃದ್ಧಿಯು ಅವನಿಗದು ಸಾಧ್ಯವಾದುದಿಲ್ಲ.

ಶಿಶುವು ತಾಯಿಯ ಉದರದಿಂದ ಜನಿಸಿದ ಕೂಡಲೇ ಸ್ತನಪಾ
ವಷ್ಟೇ ಮಾಡಿಸಿ ಆ ಶಿಶುವಿನೊಡನೆ ಅವಳು ಮಾತಾಡದೆ ಅದಕ್ಕೆ ಏಕಾ
ಸ್ಥಳದಲ್ಲಿರಿಸಲು ಆ ಶಿಶುವಿನ ಜ್ಞಾನಮಯ ಕೋಶವು ಸಮೃದ್ಧವಾಗ
ವಾಚಾಹೀನವಾಗಿ ಮೂಕಾಗುತ್ತದೆ. ಇದರಿಂದ ಶಿಶುವಿನಕಾಯ, ಮ
ಭಾವಗಳ ಅಭಿವೃದ್ಧಿಗಾಗಿ ತಾಯಿಯು ಕಾಯ, ಮನ ಭಾವಗಳ
ಪರಿಪೋಷಿಸಿ ಬೆಳೆಯಿಸಿ ಸಂವರ್ಧಿಸುತ್ತಾಳೆ. ಆ ಶಿಶುವು ದೊಡ್ಡ
ಗುತ್ತ ಮನೆಯಲ್ಲಿರುವ ಅಕ್ಕ, ಅಣ್ಣ, ತಮ್ಮ, ತಾಯಿ-ತಂದೆ ಮೊ
ಲಾದವರ ಸಾಂಘಿಕ ಜೀವನದ ಸಾಮೂಹಿಕ ಪ್ರೇಮಮಯ ವಾತಾವರ
ದಲ್ಲಿ ಬೆಳೆಯುತ್ತದೆ.

ಒಬ್ಬನೆಯಾಗಿ ಏಕಾಂತ ಸ್ಥಳದಲ್ಲಿ ಕುಳಿತಿರಲು ಮನವು ಮೆಚ್ಚದೆ ಇನ್ನ್ಯಾರಾದರೂ ಬೇಕೆಂಬ ಅಪೇಕ್ಷೆಯಾಗುತ್ತದೆ. ಮನುಷ್ಯ ಜೀವನದಲ್ಲಿ ವ್ಯಕ್ತಿಗತ ಸುಖ ಸಮೃದ್ಧಿಗೆ ಸಾಂಘಿಕ ಜೀವನವು ಅತ್ಯಾವಶ್ಯಕವಾಗಿದೆ.

ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆಯಲ್ಲಿ ಪರಿವರ್ತನೆಗೊಳಿಸಿ, ಮಾನವ ಜೀವನವನ್ನು ಪೂರ್ಣಾವಸ್ಥೆಗೆ ಒಯ್ಯುವ ವಿಧಿ ವಿಧಾನಗಳಿಗೆ ಧರ್ಮ ಸಂಸ್ಕಾರವೆನ್ನುತ್ತಾರೆ.

ಧರ್ಮ ಶಬ್ದವು "ಧೃ,, ಧಾರಣೆ ಅಂದರೆ ಧರ್ಮವು ಅಖಂಡವಾಗಿ ಧರಿಸುವದೆಂದು ಬೋಧವಾಗುತ್ತದೆ. ಸಂಸ್ಕಾರ ಶಬ್ದವು "ಕೃ,, ಧಾತುವಿನ ಹಿಂದೆ "ಸಂ,, ಉಪಸರ್ಗವು ಇಡಲಾಗಿ "ಸಂ ಕೃ,, ಚನ್ನಾಗಿ ಮಾಡುವ ಅಂದರೆ ವಿಹಿತ ಸಂಸ್ಕಾರ ಜನ್ಯ ಕರ್ಮ-ಗಳನ್ನೇ ಧರಿಸು ಎಂದು ಧರ್ಮಸಂಸ್ಕಾರದ ಅರ್ಥವಾಗುತ್ತದೆ.

ಮಾನವನು ಜನ್ಮದಾರಭ್ಯ ಮರಣಾಂತ್ಯದವರೆಗೆ ಧರ್ಮ ಸಂಸ್ಕಾರ ಹೊಂದುವಾಗ ಸಾಮೂಹಿಕ ಮಾನವರ ಸಂಘಮಯ ಜೀವನದಲ್ಲಿ ಸಮರ್ಪಿತವಾಗದ ವಿನಃ ವ್ಯಕ್ತಿಗತ ಮತ್ತು ಸಾಮೂಹಿಕ ಸುಖ ಶಾಂತಿಗೆ ಪ್ರತಿಯೊಬ್ಬನು ಅಸಮರ್ಥನಾಗಿರುವನು.

ಧರ್ಮ ಸಂಸ್ಕಾರದ ವಿಚಾರವು ವಿಮರ್ಶಿಸಿ ನೋಡಲು ತಾಯಿಯು ಶಿಶುವಿನ ಜನನ ಸಂಸ್ಕಾರದಲ್ಲಿ ಒಬ್ಬಳೇಯಾಗಿ ಪ್ರಸವ ಕ್ರಿಯೆಯು ಮಾಡಲು ಅವಳಿಗೆ ಅದು ಸಾಧ್ಯವಿರದೆ, ತನಗಿಂತಲು ಭಿನ್ನ ವ್ಯಕ್ತಿಗಳ ಸಹಯೋಗವು ಬೇಕೆ ಬೇಕು. ಅಂದರೆ ಶಿಶುವಿನ ಉದಯವು ಸಾಂಘಿಕ ಜೀವನದ ವಿನಃ ಸಾಧ್ಯವಿಲ್ಲದಾಗಿದೆ. ಸ್ತ್ರೀ ಪುರುಷರು ತಮ್ಮ ವೈಯಕ್ತಿಕ ದಾಂಪತ್ಯ ಪ್ರೇಮದಲ್ಲಿ ಪುತ್ರ ಸಂತಾನ ಪಡೆದರೂ, ಆ ಶಿಶುವಿನ ನಾಮಕರಣ ಸಂಸ್ಕಾರದಲ್ಲಿ ತಾವು ಉಭಯ ದಂಪತಿಗಳು ಅಸಮರ್ಥರೆನಿಸಿ, ಪುರವಾಸಿ ಸೌಭಾಗ್ಯ ಮಾತೆಯರನ್ನು, ಪುರೋಹಿತರನ್ನು, ತಮ್ಮ ಮನೆಗೆ ಆಮಂತ್ರ–

ಣ ಮೂಲಕ ಕರೆಯಿಸುತ್ತಾರೆ. ಅವರಿಗೆ ಆಸನವಿತ್ತು, ಗಂಧ, ಕುಂಕುಮ ಫಲ, ತಾಂಬೂಲಾದಿಗಳಿಂದ ಅರ್ಚಿಸಿ ಆ ಶಿಶುವಿನ ತಾಯಿ ತಂದೆಯರು ವಿನಯಾನ್ವಿತರಾಗಿ ಕೆಲಕಾಲ ತಮ್ಮ ಶಿಶುವೆಂಬ ಅಹಂಭಾವವಳಿದು ನಿಮ್ಮದೆಂಬ ಸಾಮೂಹಿಕ ಭಾವದಲ್ಲಿ ಸೌಭಾಗ್ಯ ಮಹಿಳೆಯರ, ಪುರೋಹಿತರ, ಸಂಘ ಸಭೆಯಲ್ಲಿ ಅನನ್ಯಭಾವದೊಡನೆ ಎರಡೂ ಹಸ್ತಗಳಿಂದ ಆ ಶಿಶುವನ್ನು ಸಮರ್ಪಿಸುತ್ತಾರೆ. ಎಲ್ಲರೂ ಬಹು ಹಸ್ತಗಳಿಂದ ಆ ಶಿಶುವನ್ನು ಸಾಂಘಿಕ ಶಕ್ತಿಯಲ್ಲಿ ಸ್ವೀಕರಿಸಿ, ಧರ್ಮ ಸಂಸ್ಕಾರ ವಿಧಿಗನುಸಾರ ಮಂಗಲಾಶೀರ್ವಚನ ಪೂರ್ವಕ ನಾಮಕರಣ ಸಂಸ್ಕಾರ ಮಾಡುತ್ತಾರೆ.

ನಾಮಾಭಿಧಾನ ಪಡೆದ ಶಿಶುವು ಬಹು ಹಸ್ತಗಳಿಂದ ಪುನಃ ತಾಯಿಯ ಬಳಿಗೆ ಬರಲು, ನನ್ನ ಮಗು ಎಂಬ ವಾತ್ಸಲ್ಯಭಾವದ ಅಹಂಭಾವವು ಮತ್ತೆ ಜಾಗೃತವಾಗಿ; ಅವಳು ಅದರ ಸ್ವಾಮಿಯಾದರೂ ನಾಮಕರಣ ಸಂಸ್ಕಾರದಲ್ಲಿ ಅಲ್ಪಕಾಲ ತನ್ನ ಸ್ವಾಮಿತ್ವವನ್ನು ಮರೆಯುತ್ತಾಳೆ.

ಅನಾಮಧಾರಿ ಶಿಶುವು ನಾಮಕರಣ ಸಂಸ್ಕಾರ ಮೂಲಕ ನಾಮಧಾರಿಯಾಗಿ ರಾಷ್ಟ್ರದಲ್ಲಿ ಗಣ್ಯವಾಗುತ್ತದೆ. ಒಂದು ಪಕ್ಷ ತಾಯಿ ತಂದೆಗಳಿಂದಲೇ ಆ ಮಗುವಿಗೆ ನಾಮಾಭಿಧಾನವಾಗಲು, ಇವನ ಹೆಸರು ಏನಿರುವದೆಂದು ಯಾವದೇ ಒಂದು ನಾಮವು, ಪರರಿಗೆ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಪುರವಾಸಿಗಳ್ಯಾರೂ ಅದಕ್ಕೆ ಸಾಕ್ಷೀಭೂತರಾಗಿಲ್ಲವಾದರಿಂದ ರಾಷ್ಟ್ರದಲ್ಲಿ ಒಂದು ಹೊಸ ಶಿಶುವಿನ ಜನ್ಮವಾಗಿದೆಯೆಂದು ಕಲ್ಪಿಸಲು ಸಾಧ್ಯವಿಲ್ಲ. ಜನನ ಮತ್ತು ನಾಮಕರಣ ಸಂಸ್ಕಾರಗಳಲ್ಲಿ ಪರರು ಸಾಕ್ಷೀಭೂತರಿರದಿದ್ದಲ್ಲಿ, ಆ ಶಿಶುವು ದೊಡ್ಡದಾಗಲು, ಇವನ್ಯಾರ ಮಗು? ಇವನ್ಯಾರು! ಇವನ್ಯಾರ ಸಂಪತ್ತಿಗೆ ಅಧಿಕಾರಿಯಾಗುವನೆಂದು ಸಮಾಜವು ಕಲ್ಪಿಸುವದು. ರಾಷ್ಟ್ರದ ಸುವ್ಯವಸ್ಥೆಗಾಗಿ ಕಲ್ಪಿಸಿದ ಸ್ಥಾವರ ಜಂಗಮಾಸ್ತಿಯ ಘಟಕವಾದ ಮನೆ ಮೊದಲಾದವುಗಳು, ಮನುಷ್ಯರ ಹಕ್ಕು ಪತ್ರಗಳಲ್ಲಿ ಸಿದ್ಧತೆ ಪಡೆ-

ಸುವದು ಸಂಘ ರಾಷ್ಟ್ರಗಳಿಗೆ ಸಾಧ್ಯವಿಲ್ಲ. ಬಹುಜನ ಸಮಾಜವು ಒಪ್ಪಿದುದರ ಪ್ರತಿಕ್ರಿಯಾರೂಪದಾಗಿರುವದೇ ಸಂಘ ರಾಷ್ಟ್ರವಾಗಿರುವದು.

ಧರ್ಮ ಸಂಸ್ಕಾರ ಮೂಲಕ ನಾಮಾಭಿಧಾನವಾಗಲು, ಶಿಶುವಿನ ತಾಯಿ ತಂದೆಗಳು ನಮ್ಮ ಮಗು ಎಂಬ ಭಾವದಲ್ಲಿ ಅವನ ನಾಮವನ್ನು ವ್ಯಷ್ಟಿರೂಪವಾಗಿ ಧರಿಸುತ್ತಾರೆ. ಸಮಾಜವು ಆ ಶಿಶುವನ್ನು ಇಂಥವರ ಮಗುವೆಂದು ಇಂಥವರು ಅದರ ತಾಯಿ ತಂದೆಗಳೆಂದು ಸಮಷ್ಟಿರೂಪವಾಗಿ ಧರಿಸುತ್ತದೆ.

ಉಪನಯನ ( ಗುರುಸನ್ನಿಧಿಯಲ್ಲಿರುಸುವಿಕೆ ) ಮತ್ತು ದೀಕ್ಷಾ ಸಂಸ್ಕಾರಗಳಲ್ಲಿ, ಗೃಹಸ್ಥರು ತಮ್ಮ ಮಕ್ಕಳ ಜ್ಞಾನಾರ್ಜನೆಗೆ, ಆಚಾರ್ಯ ಸನ್ನಿಧಿಯಲ್ಲಿ, ದಕ್ಷಿಣೆಸಹಿತ ಸಾಷ್ಟಾಂಗಪ್ರಣಿಪಾತ ಪೂರ್ವಕ ಅನನ್ಯ ಭಾವದಲ್ಲಿ ಪ್ರಾರ್ಥಿಸಿ ತಮ್ಮ ಮಕ್ಕಳಿಗೆ ತಾಯಿ ತಂದೆಗಳು ಸಮರ್ಪಿಸುತ್ತಾರೆ. ನನ್ನ ಮಗುವೆಂಬ ವ್ಯಷ್ಟಿ ಭಾವವಳಿದು ನಿಮ್ಮದೆಂಬ ಸಮಷ್ಟಿ ಭಾವದಲ್ಲಿ ಸಮರ್ಪಿಸದ ವಿನಃ ಆಚಾರ್ಯನು ಆ ಮಕ್ಕಳಿಗೆ ಉಪನಯನ ದೀಕ್ಷಾ ಸಂಸ್ಕಾರ ಮಾಡಲಾರನು. ಆಚಾರ್ಯನ ಗುರುಕುಲಾಶ್ರಮದಲ್ಲಿ, ಮಕ್ಕಳನ್ನು ಸಮರ್ಪಿಸಿದ ಬಳಿಕ ಆಶ್ರಿತ ವಟುಗಳಿಗೆ ತನ್ನ ಶಿಷ್ಯರೆಂದು ಭಾವವಾಗಿ, ತ್ರಿವಿಧರೂಪ ದೀಕ್ಷಾವಿಧಾನ ಶಿಕ್ಷಣವನ್ನು ಅನುಗ್ರಹಿಸುತ್ತಾನೆ.

ತಾಯಿ ತಂದೆಗಳ ಸಂಸ್ಕಾರದಲ್ಲಿ ಮಕ್ಕಳು, ಎನ್ನಮನೆ, ಎನ್ನ ಬಂಧು-ಬಾಂಧವರು, ಎನ್ನ ಗ್ರಾಮವೆಂಬ ಅಲ್ಪ ಕ್ಷೇತ್ರದಲ್ಲಿ ಜನಿಸಿ, ಉಂಡುಟ್ಟು ಬೆಳೆಯುತ್ತಾರೆ. ಮತ್ತೆ ಅವರು ವಿದ್ಯಾರ್ಜನೆಗೋಸುಗ ಗುರುಕುಲಾಶ್ರಮದಲ್ಲಿ ವಾಸಿಸಿ ಅಸಂಬಂಧಿತ ಸಾಮೂಹಿಕ ಜನರ ಸೇವೆ ಮಾಡುತ್ತ ಸಾಮೂಹಿಕ ಜನಗಳ ಗುರುಕುಲ ಸಂಘ ಸಂಸ್ಥೆಯಿಂದ ಅಶನ ವಸನಗಳ ವ್ಯವಸ್ಥೆಗೊಂಡು ವಿದ್ಯಾರ್ಜನೆ ಮಾಡುತ್ತಾರೆ.

ಗುರುಕುಲದ ಆಚಾರ್ಯನು ಶಿಕ್ಷಣವಿಧಾನದಲ್ಲಿ, ತನ್ನ ವಟು
ಗಳಿಗೆ * ೧ ಕ್ರಿಯಾ, * ೨ ಮನು ಮತ್ತು * ೩ ವೇಧಾ ಹೀಗೆ ಮೂರು
ವಿಧ ದೀಕ್ಷೆಗಳನ್ನು ಅನುಗ್ರಹಿಸುತ್ತಾನೆ.

---

* ೧ ಕ್ರಿಯಾದೀಕ್ಷೆ:— ಇಹಲೋಕ ಜೀವನದ ಸುಖ ಸಮೃದ್ಧಿಗಾ
ಭೌತಿಕ ವಿದ್ಯೆಯನ್ನಭ್ಯಸಿಸುವಾಗ ಗುರುಕುಲಾಶ್ರಮದಲ್ಲಿ ಪ್ರಥಮದ
ಸೇವಾರೂಪ ಶಿಕ್ಷಣವು ಕೊಡಲ್ಪಡುವದು. ಆದರಿಂದ ವಟುವಿನ ಕಾಯ
ಭಾವ, ಕಾಯಮೋಹ, ಕಾಯರತೆ ಅಳಿಯುವದು. ವಿನಾಸೇವೆ ವಿದ್ಯಾರ್ಜನೆ
ಯಾದರೆ ಆ ವಿದ್ಯೆಯು ಫಲಿತವಾಗುವದಿಲ್ಲ. ಕೃಷಿ, ಆಯುರ್ವೇದ,
ರಸಾಯನ, ಖಗೋಲ, ಭೂಗೋಲ, ಗಣಿತ, ಶಿಲ್ಪ, ಯುದ್ಧ ಮೊದಲಾದ
ಅನೇಕ ವಿದ್ಯೆಗಳು ಕಲಿತು ಜೀವಿಸುವಲ್ಲಿ ಮಾನವನು ಲೋಭವಶನಾಗಿ
ಮಾನವತೆಯಿಂದ ಚ್ಯುತಿಯಾಗಿ ಪಾಪಕರ್ಮಗಳು ಸಂಭವಿಸಬಾರದೆಂದು,
ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ
ಈ ಆರು ಧರ್ಮ ನಿಯಮಗಳ ಶಿಕ್ಷಣಕ್ರಮವುಳ್ಳದ್ದು ಕ್ರಿಯಾದೀಕ್ಷೆ
ಯಾಗಿದೆ.

* ೨ ಮನುದೀಕ್ಷೆ:— ಜನ್ಮಾಂತರದಲ್ಲಿಯ ಇಹಲೋಕ, ಪರಲೋಕ
ನಾನಾವಿಧ ಭೋಗ ಸುಖಗಳ ಪ್ರಾಪ್ತಿಗೋಸುಗ, ಪ್ರಚ್ಛನ್ನರೂಪ ಅವಕಾಶ
ವಿತ ಪುಣ್ಯ ಕರ್ಮಾನುಷ್ಠಾನಕ್ಕೆ ಅವಶ್ಯಕ ಆಧಿಭೌತಿಕ, ಆಧಿದೈವಿಕ
ವಿದ್ಯೆಗಳ ವಿಧಾನದಲ್ಲಿ ಅನ್ನದಾನ, ವಸ್ತ್ರದಾನ, ಭೂದಾನ,
ಗೋದಾನ, ಧನದಾನ, ವಿದ್ಯಾದಾನ, ಔಷಧದಾನ, ಪ್ರಾಣದಾನ, ಪುತ್ರ
ದಾನ, ಪ್ರೇಮದಾನ, ಪಾತ್ರಾಪಾತ್ರ ವಿಚಾರಪೂರ್ವಕ ವರ್ತಿಸುವ ದಾನ
ಕರ್ಮಾನುಷ್ಠಾನ ಶಿಕ್ಷಣಗಳು.

ಮಾತೃಭಕ್ತಿ, ಪಿತೃಭಕ್ತಿ, ಆಚಾರ್ಯಭಕ್ತಿ, ಅತಿಥಿಭಕ್ತಿ, ದೇಶಭಕ್ತಿ,
ಈಶಭಕ್ತಿ, ದೇವತಾಭಕ್ತಿ ಮೊದಲಾದ ಪೂಜಾ ಕರ್ಮಾನುಷ್ಠಾನ ಶಿಕ್ಷಣಗಳು.

ಆಚಾರ್ಯನಿಂದ ಈ ತ್ರಿವಿಧ ದೀಕ್ಷಾರೂಪ ಶಿಕ್ಷಣವನ್ನು ಪಡೆದ ಆ ದೀಕ್ಷಿತ ವಟುವಿಗೆ ಸಮಾವರ್ತನ ಸಂಸ್ಕಾರ ವಿಧಿಗನುಸಾರವಾಗಿ, ಉಪನಯನ ವಿಧಿಯ ವ್ರತ ವಿಸರ್ಜನೆಯಾಗುತ್ತದೆ. ಸಮಷ್ಟಿರೂಪ ಗುರುಕುಲಾಶ್ರಮದ ಸೇವಾ ನಿವೃತ್ತನಾಗುತ್ತಾನೆ.

ಪುನಃ ಆಚಾರ್ಯನು ಆ ಶಿಷ್ಯನಿಗೆ ವ್ಯಷ್ಟಿಮಯ ಅಲ್ಪ ಕ್ಷೇತ್ರದ ಸ್ವಗೃಹಕ್ಕೆ ಗಮಿಸಿ, ಮಾತೃ, ಪಿತೃ, ಅತಿಥಿ, ಗುರು, ದೇಶ ಮೊದಲಾದವರ ಸೇವೆಗಾಗಿ ಆಜ್ಞಾಪಿಸುತ್ತಾನೆ.

---

ವೇದ ವೇದಾಂಗಗಳ ಅಧ್ಯಯನ, ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ, ಶಿವಯೋಗಗಳು ಮತ್ತು ಪಾಶುಪತಾಸ್ತ್ರ, ಗರುಡಾಸ್ತ್ರ, ಸುದರ್ಶನಾಸ್ತ್ರ, ವಾಯುವಾಸ್ತ್ರ, ಅಗ್ನ್ಯಾಸ್ತ್ರ, ಜಲಾಸ್ತ್ರ ಮೊದಲಾದ ಅಸ್ತ್ರಗಳು ಮತ್ತು ನಾರಾಯಣಾಷ್ಟಾಕ್ಷರಿ ಜಪ, ವಿಷ್ಣು ದ್ವಾದಶಾಕ್ಷರಿ ಜಪ, ಶಕ್ತಿ ತ್ರಯೋದಶಾಕ್ಷರ ಜಪ, ಸೂರ್ಯ ಗಾಯತ್ರೀ ಜಪ, ಶಿವಗಾಯತ್ರೀ ಜಪ, ಗಣಪತಿ ನವಾಕ್ಷರ ಜಪ, ಶಿವಪಂಚಾಕ್ಷರಿ ಜಪ ಅನೇಕ ಮಂತ್ರ ಜಪಾನುಷ್ಠಾನ ಶಿಕ್ಷಣ ಕ್ರಮವು ಅಂದರೆ, ದಾನ, ಪೂಜಾ, ಜಪ ಈ ಮೂರು ಧರ್ಮನಿಯಮಗಳ ಶಿಕ್ಷಣ ಕ್ರಮ ಉಳ್ಳದ್ದು ಮನು ದೀಕ್ಷೆಯಾಗಿದೆ.

* ೩ **ವೇಧಾದೀಕ್ಷೆ :** — ಪಾರಮಾರ್ಥ ಸುಖ ಸಾಧನೆಯಾದ ಅಧ್ಯಾತ್ಮ ವಿದ್ಯಾ ವಿಧಾನವಲ್ಲಿ, ನಾನು ದೇಹಿ ಎಂಬ ಅಹಂಭಾವದ ಅಜ್ಞಾನ ಪರಿಧಿ-ಯನ್ನು ವೇಧಿಸಿ ಅಂದರೆ ವಿಚ್ಛೇದಿಸಿ; ತನ್ಮೂಲಕ ಆತ್ಮ ಅನಾತ್ಮವೆಂಬ ವಿವೇಕವು ಜಾಗೃತವಾಗುತ್ತದೆ. ನಾನು ಕೇವಲ ಜ್ಞಾನಸ್ವರೂಪನು, ಚರಾಚರ ಸೃಷ್ಟಿಯು ಪರಬ್ರಹ್ಮ ಸ್ವರೂಪದೆಂಬ ಬ್ರಹ್ಮವಿದ್ಯೆಯ ಜ್ಞಾನೋ-ದಯವಾಗಿ; ಪುನರಾವರ್ತಿರಹಿತ ಮೋಕ್ಷ ಸುಖವನ್ನುಂಟು ಮಾಡುವ ಧ್ಯಾನ ನಿಯಮದ ಶಿಕ್ಷಣಕ್ರಮ ಉಳ್ಳದ್ದೇ ವೇಧಾದೀಕ್ಷೆಯಾಗಿದೆ.

ಸಾರಾಂಶ:— ಉಪನಯನ ಮತ್ತು ದೀಕ್ಷಾ ವಿಧಿಯ ಧರ್ಮಸಂಸ್ಕಾರ ಮೂಲಕ; ವಟುಗಳ ತಾಯಿ ತಂದೆಗಳು ನಮ್ಮ ಮಕ್ಕಳು ಸಾಮೂಹಿಕ ಸಂಘ ಜೀವನದಲ್ಲಿ ಸಮರ್ಪಿತರಾದರೆಂದು ಭಾವದಲ್ಲಿ ಧರಿಸುತ್ತಾರೆ. ಸಮಾಜ ಮತ್ತು ಗುರುಕುಲಾಶ್ರಮಗಳು ವಿದ್ಯಾಲಯ, ಮಹಾವಿದ್ಯಾಲಯಗಳು, ಸಂಘ ಸಂಸ್ಥೆಗಳು ನಮ್ಮ ವಿದ್ಯಾರ್ಥಿಗಳೆಂದು ಭಾವದಲ್ಲಿ ಧರಿಸುತ್ತವೆ.

ವಿವಾಹ ವಿಧಾನದಲ್ಲಿ, ವಧು-ವರರ ತಾಯಿ ತಂಡೆಗಳು ವಿವಾಹ ವಿಧಿಯು ತಾವಾಗಿಯೇ ಕಲ್ಪಿಸಿಕೊಳ್ಳದೆ ಪುರವಾಸಿಗಳನ್ನು, ಬಂಧು ಬಾಂಧವರನ್ನು, ಬಳಗದವರನ್ನು, ಪುರೋಹಿತರನ್ನು, ಆಚಾರ್ಯರನ್ನು ಆಮಂತ್ರಣ ಮೂಲಕ ತಮ್ಮ ಮನೆಗೆ ಕರೆಯಿಸುತ್ತಾರೆ. ಅವರಿಗೆ ಆಸನ, ಭೋಜನ, ಫಲತಾಂಬೂಲ, ದಕ್ಷಿಣಾದಿಗಳಿಂದ ಅರ್ಚಿಸಿ ವಂದಿಸುತ್ತಾರೆ. ಸರ್ವರ ಅಪ್ಪಣೆ ಪಡೆದು ಆಚಾರ್ಯನ ಅಧ್ಯಕ್ಷತೆಯಲ್ಲಿ ಸೇರಿದ ಸಭಾವೃಂದ ಸಂಘಶಕ್ತಿಯಲ್ಲಿ ವಿವಾಹ ವಿಧಿಗನುಸಾರವಾಗಿ **"ಕೂರ್ಯಾತ್ ಸದಾಮಂಗಲಂ ಸಾವಧಾನ"** ವೆಂದು ಉಭಯ ವಧುವರರಿಗೆ ಈಶ್ವರನು ಸದಾ ಮಂಗಲವನ್ನುಂಟು ಮಾಡಲಿ; ಈ ಸಂಸಾರ ಸಾಗರವು ಮಹಾ ದುಸ್ತರವಾಗಿದೆ ಪಾಪಕರ್ಮಗಳಿಂದ ಎಚ್ಚರಿಕೆ, ಮರೆಯಬೇಡಿರೆಂದು ಸಂಬೋಧನೆಪೂರ್ವಕ ಆಶೀರ್ವಾದಿಸುತ್ತಾರೆ.

ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮದಲ್ಲಿ ಮಾನವ ಜೀವನವು ಪರಿವರ್ತನೆ ಹೊಂದುವಾಗ ವಧುವರರ ತಾಯಿ ತಂದೆಗಳು ಕೆಲವು ಕಾಲ ನಮ್ಮ ಮಕ್ಕಳಲ್ಲ, ನಿಮ್ಮ ದೈವ ಜನರ ಮಕ್ಕಳೆಂದು ಸಾಮೂಹಿಕ ಸಂಘದಲ್ಲಿ ಅವರ ಭಾವ ಸಮರ್ಪಣೆಯಾಗದ ವಿನಃ ವಿವಾಹ ವಿಧಾನವು ಜರುಗುವದಿಲ್ಲ.

ಈ ವಿವಾಹ ವಿಧಿಯ ಧರ್ಮಸಂಸ್ಕಾರ ಮೂಲಕ ವರನು "ಇವಳು ನನ್ನ ಪತ್ನಿ" ಎಂದು, ವಧುವು "ಇವನು ನನ್ನ ಪತಿ" ಎಂದು ವ್ಯಷ್ಟಿರೂಪ ಭಾವದಲ್ಲಿ ವಿವಾಹಿತ ಸ್ತ್ರೀ-ಪುರುಷರು ಧರಿಸುತ್ತಾರೆ.

ಸಮಾಜವು ಇಂಥ ಸ್ತ್ರೀಯು ಇಂಥವನ ಪತ್ನಿ ಎಂದು, ಇಂಥ ಪುರುಷನು ಇಂಥವಳ ಪತಿ ಎಂದು, ಆ ವಧು-ವರರ ನಾಮ ರೂಪಾದಿಗಳನ್ನು ಸಮಷ್ಟಿರೂಪದಾಗಿ ಧರಿಸುತ್ತದೆ.

ಇಲ್ಲಿಯುವರೆಗೂ ಮಂಗಲ ಕಾರ್ಯಗಳ ವಿವೇಚನೆಯಾಗಿದೆ. ಮಾನವನ ಮರಣೋತ್ತರ ಕ್ರಿಯೆಯಾದ ಅಂತ್ಯೇಷ್ಟಿ ಸಂಸ್ಕಾರದಲ್ಲಿ ಯಾರೇ ಮೃತರಾಗಲು ಅವರ ಅಂತ್ಯಸಂಸ್ಕಾರಕ್ಕಾಗಿ ಬಂಧು-ಬಾಂಧವರನ್ನು, ಬಳಗದವರನ್ನು, ಪುರವಾಸಿಗಳನ್ನು ಆಮಂತ್ರಣದಿಂದ ಕರೆಯಲಾರರು. ದುಃಖದ ವಾರ್ತೆಯು ಕೇಳಿ, ದುಃಖದಲ್ಲಿ ಸಹಭಾಗಿಯಾಗಿ, ಪ್ರೇಮಭಾವ, ದಯಾಭಾವವರಿತು ಎಲ್ಲರೂ ತಾವಾಗಿಯೇ ಬರುವದುಂಟು.

ಒಂದು ಪಕ್ಷ ಹಾಗೆ ಯಾರೂ ಬಾರದಿರುವಾಗ ಆ ಮನೆಯಲ್ಲಿ ಒಬ್ಬಿಬ್ಬರಿರಲು, ವಿಧವೆ, ರೋಗಿ, ಬಾಲ್ಯ, ಕೌಮಾರ್ಯರಿರಲು ಅಥವಾ ವಿಪುಲ ಜನರಿದ್ದಾಗ್ಯು ಪ್ರೇಮ ವಸ್ತುವಿನ ವಿಯೋಗವಾಗಿ, ಅಪಾರ ದುಃಖವಾದ್ದರಿಂದ ಅವರ ಶರೀರದ ಮನೋಭಾವನೆಗಳು ಬಲಹೀನವಾಗುವ ಪ್ರಯುಕ್ತ, ಶವ ತೊಳೆಯುವ, ಹೊರುವ, ಒಯ್ಯುವ, ದಹನ ಮಾಡುವ, ಸಮಾಧಿಗೊಳಿಸುವ, ಯಾವತ್ತು ಕ್ರಿಯೆಗಳು ಮಾಡಲು ಅವರಿಗೆ ಸಾಧ್ಯವಿಲ್ಲ.

ಮರಣಕ್ಕೆ ಸಾಕ್ಷೀಭೂತರ್‍ಯಾರಿರದಿದ್ದಲ್ಲಿ ಅವನ ಉತ್ತರಕಾಲದ ಗೃಹಭಾರಕ್ಕೆ, ಹಕ್ಕದಾರರು ಯಾರೆಂಬುವದು ನಿರ್ಣಯಿಸುವದು ಸಾಧ್ಯವಿಲ್ಲದಾಗುವ ಪ್ರಯುಕ್ತ, ಮಾನವನ ಅಂತ್ಯ ಸಂಸ್ಕಾರಕ್ಕೂ ಸಾಮೂಹಿಕ ಜನಸಂಘ ಶಕ್ತಿಯು ಅತ್ಯಾವಶ್ಯಕವಾಗಿರುತ್ತದೆ.

**ಸಾರಾಂಶ :–** ಜನನ, ನಾಮಕರಣ, ಉಪನಯನ, ದೀಕ್ಷಾ, ಸಮಾವರ್ತನ, ವಿವಾಹ, ಅಂತ್ಯೇಷ್ಟಿ ಮುಂತಾದ ಧರ್ಮ ಸಂಸ್ಕಾರಗಳಲ್ಲಿ ಮುಖ್ಯವಾಗಿ ಹೇಳುವದೆಂದರೆ, ಜನ್ಮದಾರಭ್ಯ

ಮರಣಾಂತ್ಯದವರೆಗೆ ಮಾನವ ಜೀವನ ಪ್ರವೃತ್ತಿಯು ಪರಿವರ್ತನೆ ಹೊಂದುವಾಗ ಧಾರ್ಮಿಕ ಕ್ಷೇತ್ರದ ಸಾಂಘಿಕ ಜೀವನದಲ್ಲಿಯೇ ಪೂರ್ಣಾವಸ್ಥೆಗೆ ಮುಟ್ಟುತ್ತದೆ. ಸಾಂಘಿಕ ಜೀವನವು ಮಾನವನ ವಿಕಾಸಕ್ಕೆ ಅನಿವಾರ್ಯ, ಅವಶ್ಯಕವೆಂಬುವದು ಪ್ರತ್ಯಕ್ಷವಾಗಿದೆ. ಧರ್ಮಸಂಸ್ಕಾರದ ಮೂಲಕ ಮಾನವ ಜೀವನವು ಉತ್ತರೋತ್ತರ ಅಭಿವೃದ್ಧಿಯಾಗಿ ವ್ಯಕ್ತಿಗತ ಸುಖ-ಶಾಂತಿಗೂ, ರಾಷ್ಟ್ರದ ವ್ಯಾಪಕ ಸುಖ ಶಾಂತಿಗೂ, ಅವಕಾಶವಿತ್ತಿದೆ.

ಒಂದು ಪಕ್ಷ ಕೆಲವರು ರಾಷ್ಟ್ರದ ಯೋಗಕ್ಷೇಮಕ್ಕೆ ಧರ್ಮವು ಅನಾವಶ್ಯಕವೆಂದಲ್ಲಿ ಧರ್ಮದ ವಿನಃ ರಾಷ್ಟ್ರದ ಅಸ್ತಿತ್ವವೇ ಸಂಭವಿಸುವದಿಲ್ಲ. ಸಂಘಮಯ ರಾಷ್ಟ್ರಗಳು ಕೇವಲ ಮಾನವನ ಸಂರಕ್ಷಣೆಗಲ್ಲದೆ ಮಾನವನ ಧರ್ಮ ಸಂರಕ್ಷಣೆಗಾಗಿಯೂ ಇರುತ್ತವೆ. ರಾಷ್ಟ್ರವು ಧರ್ಮನಿರಪೇಕ್ಷ ವಾಗಿರದೆ ಧರ್ಮ ಸಾಪೇಕ್ಷಕವಾಗಿರುತ್ತದೆ. ಉದಾ:- ಕೃಷಿಕನು ಅನ್ನಧಾನ್ಯ ಗಳನ್ನು ಉತ್ಪಾದನೆಗೊಳಿಸದಿದ್ದಲ್ಲಿ ಬೀಸುವ, ಕುಟ್ಟುವ, ಪಾಕ ಮಾಡುವ ಮುಂತಾದ ಯಾವತ್ತು ಸಾಧನ ಸಾಮಗ್ರಿಗಳು ನಿರರ್ಥಕವಾಗುವಂತೆ ಧರ್ಮಸಂಸ್ಕಾರ ಮೂಲಕ ಮಾನವರಿಗೆ ಸುಸಂಸ್ಕಾರಯುಕ್ತರನ್ನಾಗಿ, ಸೂಚಾರಿತ್ರ್ಯ, ದೈವೀಗುಣ, ಮಾನವತಾ ಸಂಪನ್ನರಾಗಿ ಮಾಡದಿದ್ದಲ್ಲಿ ರಾಷ್ಟ್ರವು ಮಾನವಸಮಾಜದ ವ್ಯಾಪಕ ಸುಖಶಾಂತಿಗೆ ಸಂರಕ್ಷಣೆಗೊಳಿಸಲು ಅಸಮರ್ಥವಾಗುವದು.

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ನಾಲ್ಕು ಧರ್ಮ ನಿಯಮಗಳು ಮಾನವನಿಗೆ ಸ್ವಾಭಾವಿಕವಾಗಿವೆ. ಮಾನವತೆಯ ಚತುಃಸೀಮೆಯಾಗಿವೆ. ಎಲ್ಲಿ ಮಾನವನೋ ಅಲ್ಲಿ ಮಾನವತೆಯು ಇರುವುದು ಸ್ವಾಭಾವಿಕವಾಗಿರುತ್ತದೆ.

ನನ್ನನ್ನು ಯಾರೂ ಹಿಂಸಿಸಬಾರದು, ಎನ್ನೊಡನೆ ಅನ್ಯರು ಅಸತ್ಯ ನುಡಿಯಬಾರದು,ಎನ್ನ ವಸ್ತುಗಳನ್ನು ಪರರು ಕದಿಯಬಾರದು, ದಾಂಪತ್ಯ ಜೀವನದ ಸ್ತ್ರೀ-ಪುರುಷರು ತಮ್ಮ ವಿಷಯವಾಗಿ ಪರಸ್ತ್ರೀ, ಪರಪುರುಷರಿಂದ ವಿನಯಭಂಗವು, ವ್ಯಭಿಚಾರ ಪ್ರಮಾದವು ಸಂಘಟಿಸಬಾರದೆಂಬ ಪ್ರವೃತ್ತಿಯು ಎಲ್ಲರಿಗೆ ಸ್ವಾಭಾವಿಕವಾಗಿರುವದು.

ಅನ್ಯರು ತನ್ನೊಡನೆ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ದುಷ್ಕೃತಿಗಳಿಂದ ವರ್ತಿಸಿದರೆ ದುಃಖದ ಪ್ರತೀತಿಯಾಗುವ ಕಾರಣ **ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವು ನಾಲ್ಕು ಮಾನವನಿಗೆ ಸುಖ ಶಾಂತಿಯ ಚತುಃಸೀಮೆಯಾಗಿವೆ.**

ಮಾನವನಿಗೆ ತನ್ನ ಸ್ವಾಭಾವಿಕ ಧರ್ಮಪ್ರವೃತ್ತಿಯಲ್ಲಿ ಮರವು ಆಗಿ ತಾನು ಪರರನ್ನು ಹಿಂಸಿಸಬೇಕೆಂಬ ಅಪೇಕ್ಷೆಯಲ್ಲಿ, ನೀನು ಹಿಂಸಿಸಬೇಡವೆಂದು, ತಾನು ಪರರಿಗೆ ಅಸತ್ಯ ಹೇಳಬೇಕೆಂಬ ಅಪೇಕ್ಷೆಯಲ್ಲಿ, ನೀನು ಅಸತ್ಯ ನುಡಿಯಬೇಡವೆಂದು, ತಾನು ಅನ್ಯರ ವಸ್ತುಗಳನ್ನು ಅಪಹಾರಗೊಳಿಸುವ ಅಪೇಕ್ಷೆಯಲ್ಲಿ ನೀನು ಅಪಹರಿಸಿ ಸ್ತೇಯ ಮಾಡಬೇಡವೆಂದು, ದಾಂಪತ್ಯ ಜೀವನದ ಸ್ತ್ರೀ-ಪುರುಷರು ವಿಷಯಾಧೀನರಾಗಿ ತಾವು ಪರಸ್ತ್ರೀ-ಪರಪುರುಷರ ಸಹವಾಸದ ದುರಾಪೇಕ್ಷೆಯಲ್ಲಿ, ನೀವು ವ್ಯಭಿಚಾರ ಪ್ರವೃತ್ತರಾಗಬೇಡಿರೆಂದು ಹೀಗೆ ಪ್ರತಿಯೊಬ್ಬ ಮಾನವನ ಅಂತಃಕರಣದಲ್ಲಿ ಚೈತನ್ಯರೂಪ ನಿಗ್ರಹಶಕ್ತಿಯು ಸದೈವ ವಾಸಿಸಿ ಮಾನವ ಪದದಿಂದ ಚ್ಯುತಿಯಾಗಬೇಡವೆಂಬ ಅನುಗ್ರಹಪೂರಿತ ದೃಷ್ಟಿಯಿಂದ ದಿವ್ಯ ಸಂದೇಶವನ್ನೀಯುತ್ತದೆ.

ಆ ಅಂತರ್ನಿನಾದಕ್ಕೆ ಅನುಲಕ್ಷಿಸದೆ ಪ್ರತ್ಯಕ್ಷ ಯಾವುದೇ ಒಂದು ಪ್ರಾಣಿ ಅಥವಾ ವಸ್ತುವಿನ ವಿಷಯವಾಗಿ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಪ್ರವೃತ್ತ ವ್ಯಕ್ತಿಗೆ ಅಪರಾಧಿ ಎಂದು ಭಾವಿಸಿ ಬಂಧನದಲ್ಲಿರಿಸುತ್ತದೆ. ಮಾನವೀ ಸ್ವಾತಂತ್ರ್ಯಕ್ಕೆ ಪಾರತಂತ್ರ್ಯವನ್ನುಂಟು ಮಾಡುತ್ತದೆ.



೧ ಈ ದುಷ್ಕೃತಿಗಳು ಸಂಭವಿಸಲು ಅವೆಲ್ಲ ವಸ್ತುಗಳೂ ರಾಷ್ಟ್ರದ ಘಟಕವಾದರಿಂದ ರಾಷ್ಟ್ರನಿಯಾಮಕ ಶಾಸನ ಸಂಘವು ಆ ದುಷ್ಕರ್ಮ

ಇದರಿಂದ ಹಿಂಸಾ, ಅಸತ್ಯ, ಸ್ತ್ರೇಯ, ವ್ಯಭಿಚಾರ ಇವು ನಾಲ್ಕು ದುಷ್ಕೃತಿಗಳು ರಾಷ್ಟ್ರ ಶಾಸನ ಸಂಘಕ್ಕೂ ಮಾನ್ಯವಿಲ್ಲೆಂಬುವದು ಪ್ರತ್ಯಕ್ಷವಾಗಿದೆ.

ಮಾನವನ ಅಂತಃಕರಣದಲ್ಲಿ ಪ್ರಚ್ಛನ್ನವಾಗಿ ಸದೈವ ವಾಸಿಸಿರುವ ಧರ್ಮರೂಪ ನಿಯಾಮಕ ಶಕ್ತಿಯ ಬಾಹ್ಯಾಂಗವೇ ರಾಷ್ಟ್ರ ನಿಯಾಮಕ ಶಾಸನ ಸಂಘ ಶಕ್ತಿಯಾಗಿರುವದು.

ಉದಾ:- ಕಟು, ಕಹಿ ವಿಷಪದಾರ್ಥಗಳು ಜಿವ್ಹೇಂದ್ರಿಯಕ್ಕೆ ಬೇಡವಾಗಿ, ಕತ್ತಲೆಯು ಕಣ್ಣಿಗೆ ಬೇಡವಾಗಿ, ಕಾಠಿಣ್ಯವು ತ್ವಚಕ್ಕೆ ಬೇಡವಾಗಿರುವಂತೆ; ಅಂತಃಕರಣದಲ್ಲಿ ಸೂಕ್ಷ್ಮರೂಪದಾಗಿ ವಾಸಿಸಿರುವ ಮನಕ್ಕೂ ಬೇಡವಾಗಿವೆ. ಬಹಿರೀಂದ್ರಿಯಗಳಿಗೂ ಚೈತನ್ಯರೂಪ ಅಂತರ್‌ಮನಕ್ಕೂ ಪರಸ್ಪರ ಅನ್ಯೋನ್ಯಾಶ್ರಯ ಸಂಬಂಧವಾಗಿರುವಂತೆ; ಅಂತಃಸೃಷ್ಟಿಯ ಧರ್ಮನಿಯಾಮಕ ಶಕ್ತಿಯ ಪ್ರತೀಕವಾಗಿ ಅದರ ಅಂಗವಾಗಿ ರಾಷ್ಟ್ರನಿಯಾಮಕ ಶಕ್ತಿಯಾಗಿರುತ್ತದೆ. ಅಂತರ್ ಬಹಿರ್ ಧರ್ಮಶಾಸನ, ರಾಷ್ಟ್ರಶಾಸನ ಶಕ್ತಿಗಳು ಪರಸ್ಪರ ಅನ್ಯೋನ್ಯಾಶ್ರಯ ಸಂಬಂಧವುಳ್ಳವಾಗಿವೆ.

ರಾಷ್ಟ್ರನಿಯಾಮಕ ಶಕ್ತಿಯು ಮಾನವನಲ್ಲಿಯ ಅತಿ ಸೂಕ್ಷ್ಮದಾದ ಸಮಷ್ಟಿರೂಪ ಧರ್ಮನಿಯಾಮಕ ಶಕ್ತಿಯ ಅನುಗಾಮಿ, ಸಹಗಾಮಿಯಾಗಿ, ಇರುವದೆಂದು ಸಿದ್ಧವಾಗುತ್ತದೆ.

ಸಾರಾಂಶ :- ಸಂಘ ರಾಷ್ಟ್ರದ ಶಾಸನ ಸತ್ತೆಯು ಮಾನವನಲ್ಲಿಯ ಅಂತರ್ನಿಯಾಮಕ ಶಕ್ತಿಯ ಖಾಸ್ (ವಿಶಿಷ್ಟ) ಪ್ರತಿನಿಧಿ ಸ್ವರೂಪದಾಗಿರುವ ದೆಂಬುದು ಪ್ರತ್ಯಕ್ಷವಾಗಿದೆ.

ಇಂಗ್ಲಂಡ, ಅಮೇರಿಕಾ, ಚೀನ, ರಶಿಯಾ, ಜಪಾನ, ಜರ್ಮನ, ಭಾರತ ಮೊದಲಾದ ಮಾನವ ನಿರ್ಮಿತ ಅನೇಕ ಸಣ್ಣ ದೊಡ್ಡ ರಾಷ್ಟ್ರಗಳಿದ್ದರೂ, ಎಲ್ಲ ರಾಷ್ಟ್ರಗಳ ರಾಜಕಾರಣವು ಮಾತ್ರ ಒಂದೇ ಒಂದಾಗಿರು-

ವದು. ಅವುಗಳ ಭೌಗೋಲಿಕ ಚತುಃಸೀಮೆಯು ಭಿನ್ನವಾಗಿದ್ದರೂ ಎಲ್ಲ ರಾಷ್ಟ್ರಗಳ ರಾಜಕಾರಣದ ಚತುಃಸೀಮೆಯು ಮಾತ್ರ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವೇ ಆಗಿರುತ್ತವೆ. ಇವು ನಾಲ್ಕು ಧರ್ಮ ನಿಯಮಗಳ ಉಲ್ಲಂಘನೆಯನ್ನು ಯಾವ ಪ್ರಜನು ಮಾಡುತ್ತಾನೆಯೋ ಅವನೇ ರಾಷ್ಟ್ರಬಾಹ್ಯನೆನಿಸುವನು.

ರಾಷ್ಟ್ರದ ಪ್ರಜರೆಲ್ಲರೂ ಹಿಂಸೆ ಮಾಡಬಾರದು, ಅಸತ್ಯ ನುಡಿಯ-ಬಾರದು, ಸ್ತೇಯ ಮಾಡಕೂಡದು, ವ್ಯಭಿಚಾರ ಪ್ರವೃತ್ತರಾಗಬಾರದೆಂದು ಸಂಘ ರಾಷ್ಟ್ರಶಕ್ತಿಯ, ಕಾರ್ಯವಾಹಕ ಜನಗಳು ಹಗಲಿರುಳು ಪ್ರಯತ್ನಿಸಿ ಶ್ರಮಿಸುತ್ತಾರೆ. ಮಾನವನು ತನ್ನ ಸ್ವಾಭಾವಿಕ ಧರ್ಮಪ್ರವೃತ್ತಿಗೆ ಮರೆತು ತನಗೆ ಅನೈಸರ್ಗಿಕವಾಗಿರುವ, ಪರಹಿಂಸೆ, ಪರಧನಸ್ತೇಯದಲ್ಲಿ ಪ್ರವೃತ್ತನಾಗಲು ಶಾಸನಸಂಘವು ಅವನ ಅನೈಸರ್ಗಿಕ ಪ್ರವೃತ್ತಿಗೆ ನಿರೋಧಿಸಿ ದಂಡಿಸದಿದ್ದಲ್ಲಿ ಮೂಲ ಸ್ವಾಭಾವಿಕ ಧರ್ಮಪ್ರವೃತ್ತಿಗೆ ಅವನು ದೂರನಾಗಿ ರಾಷ್ಟ್ರದ ಸರ್ವತ್ರ ಶಾಂತತೆಗೆ ಭಂಗ ತರುವನು. ಮಾನವರಲ್ಲಿರುವ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ಸ್ವಾಭಾವಿಕ ಧರ್ಮಪ್ರವೃತ್ತಿಯು ಚಲಿಸದೆ, ಭಂಗವಾಗದೆ ಶಾಂತಿಪೂರ್ವಕ ಸಂರಕ್ಷಣೆ ಸಂವರ್ಧನೆಯಾಗಲೆಂಬ ಸದುದ್ದೇಶಪರವಾಗಿಯೂ ಮತ್ತು ಹಿಂಸಾ, ಸ್ತೇಯ, ಅಸತ್ಯ, ವ್ಯಭಿಚಾರ ಈ ನಾಲ್ಕು ದುಷ್ಕೃತಿಗಳನ್ನು ನಿರೋಧಿಸುವ ಉದ್ದೇಶಕ್ಕಾಗಿಯೂ ಸಂಘ ರಾಷ್ಟ್ರವಿರುತ್ತದೆ.

ಮಾನವರ ಅಂತಃಕರಣದಲ್ಲಿಯ ಸ್ವಾಭಾವಿಕ ಧರ್ಮಪ್ರವೃತ್ತಿಯೇ ಅಪರಾಧಿಗಳಿಗೆ ದಂಡಿಸುವದಕ್ಕಾಗಿ, ಬಹಿರ್ ನ್ಯಾಯಸಂಘ ರೂಪದಲ್ಲಿ ಉಪಕ್ರಮಗೊಂಡಿದೆ.

ನ್ಯಾಯ ಸಂಘಕ್ಕಿಂತಲೂ ಅಪರಾಧಿಯು ಮೊದಲಿಗಿರುವನೆಂಬುದು ಶಂಕೆಯಾದಲ್ಲಿ? ನ್ಯಾಯ ಪ್ರವೃತ್ತಿಗೆ ಆವರಣವಾಗಿರುವದೇ ಅಪರಾಧಿ ಎಂಬ ಕಲ್ಪನೆಗೆ ಅವಕಾಶವಿತ್ತಿದೆ.

ಉದಾ :- ಶುದ್ಧ ಪ್ರಕಾಶವು ಸ್ವತಂತ್ರ ಒಂದೇ ಒಂದಾಗಿದ್ದು, ಕತ್ತಲೆ ಯೆಂಬುದು ಸ್ವತಂತ್ರ ವಸ್ತುವಾಗಿರುವದಿಲ್ಲ. ಪ್ರಕಾಶದ ಮೇಲೆ ಯಾವದೆ ಆವರಣವಾಗಲು; ಬೆಳಕಿನ ಅಭಾವವಾಗಿ ಕತ್ತಲೆಯು ಗಮ್ಯವಾಗುತ್ತದೆ. ಅದೇ ಕತ್ತಲೆಯಲ್ಲಿ ಪ್ರಕಾಶವು ತೋರಿಬರಲು ಕತ್ತಲೆಯು ನಾಶವಾಗುತ್ತದೆ. ಒಂದು ಪಕ್ಷ ಕತ್ತಲೆಯು ಸ್ವತಂತ್ರ ಒಂದು ವಸ್ತುವಾಗಿದ್ದಾದರೆ ಪ್ರಕಾಶದ ಅಸ್ತಿತ್ವದಲ್ಲಿ ಅದು ಪರಿಹಾರ ವಾಗುತ್ತಿರಲಿಲ್ಲ. ಪ್ರಕಾಶದ ಮೇಲೆ ಆವರಣದ ಮೂಲಕ ಕತ್ತಲೆಯೆಂಬುದು ನಿಷ್ಪನ್ನವಾಗಿ ತೋರಿಬರುವಂತೆ, ಮಾನವನಲ್ಲಿ ನ್ಯಾಯ ಪ್ರವೃತ್ತಿಯು ಜನ್ಮಸಿದ್ಧ ಸ್ವಾಭಾವಿಕ ವಾಗಿದ್ದು ಅದರ ಮೇಲೆ ಅನೈಸರ್ಗಿಕಭಾವದ ಆವರಣವಾಗಲು, ನ್ಯಾಯ ಪ್ರವೃತ್ತಿಯಲ್ಲಿ ಅನ್ಯಾಯದ ಉತ್ಪತ್ತಿಯಾಗುತ್ತದೆ. ಬಹಿರ್ ಸೃಷ್ಟಿಯ ರಾಜಕಾರಣದ ನ್ಯಾಯ-ಸಂಘ ಶ್ರೋತದ ಉಗಮ ಸ್ಥಾನವು ಅಪರಾಧಿಗಳಿಂದ ಕಲ್ಪಿತವಾಗಿ-ರದೆ, ಮಾನವನ ಮೂಲ ನೈಸರ್ಗಿಕ ಭಾವದ ಅಂತರ್ನಿಯಾಮಕ ಧರ್ಮಶಾಸನದ ನ್ಯಾಯಪ್ರವೃತ್ತಿಯಿಂದ ಉತ್ಥಾನ ವಾಗಿರುತ್ತದೆ.

ಧನಸ್ತೇಯ ಮಾಡುವ ತಸ್ಕರನು, ವ್ಯಭಿಚಾರ ಪ್ರವೃತ್ತ ಸ್ತ್ರೀ-ಪುರುಷರು, ಅವರು ಮುಚ್ಚುಮರೆಯಾಗಿ ಏಕೆ ವರ್ತಿಸುತ್ತಾರೆ? ಅಂತರ್ನಿ-ಯಾಮಕ ಸದಸದ್ವಿವೇಕದ ನ್ಯಾಯಪ್ರವೃತ್ತಿಗೆ ಮೀರಿ ಅಪರಾಧ ವಾಗುತ್ತಿ-ರುವ ಕಾರಣ ಅವರು ಮಾಡುವ ಕೃತಿಯು ಅನ್ಯಾಯವೆಂದು, ಅಪರಾಧ-ವೆಂದು ಅವರಿಗೆ ಮನವರಿಕೆಯಾಗಿದೆ. ಅಪರಾಧದ ತತ್ ಪೂರ್ವ ನ್ಯಾಯ ಪ್ರವೃತ್ತಿಯು ಸದೈವ ಜಾಗ್ರತವಾಗಿ ತೋರುತ್ತಿದೆ.

ಸಾರಾಂಶ :- ಮಾನವನ ಅಂತರಾಳದಲ್ಲಿ ಸದೈವ ಜಾಗ್ರತವಾಗಿಹ ಅಂತರ್ನಿಯಾಮಕ ಧರ್ಮಶಾಸನ ನ್ಯಾಯಶ್ರೋತದ ಉಗಮ ಸ್ಥಾನವು, ಮೊದಲಿಗೆಂಬುದೇ ಪರಮ ಸಿದ್ಧಾಂತವಾಯಿತು. ಅರ್ಥಾತ್ ನ್ಯಾಯಸಂಘವೇ ಮೊದಲು.

ಅಪರಾಧಿಗೆ ನ್ಯಾಯದಂಡದ ಶಿಕ್ಷೆಯಾಗಲು ಪಶ್ಚಾತ್ತಾಪವೆನಿಸಿ ಅನ್ಯಾಯ ಪ್ರವೃತ್ತಿಯ ಆವರಣ ಪರಿಹಾರವಾಗಿ ಅವನು ನ್ಯಾಯಪ್ರವೃತ್ತಿಗೆ ಬರುತ್ತಾನೆ. ನ್ಯಾಯ ಪ್ರವೃತ್ತಿಯು ಸ್ವತಂತ್ರವಾಗಿದೆ. ಅನ್ಯಾಯಪ್ರವೃತ್ತಿಯು ಸ್ವತಂತ್ರವಾಗಿರುವದಿಲ್ಲ. ಅದು ಆವರಣ ಮೂಲಕ ಪ್ರತೀತಿಯಾದರೂ ಆವರಣ ಪರಿಹಾರವಾದ ಮೇಲೆ ಅದರ ಅಭಾವವಾಗುತ್ತದೆ.

ಅಹಿಂಸಾ ಧರ್ಮಪ್ರವೃತ್ತಿಯು ನೈಸರ್ಗಿಕವಾಗಿದ್ದು ಅದರ ಮೇಲೆ ಅನೈಸರ್ಗಿಕ ಭಾವದ ಆವರಣವಾಗಿ, ಹಿಂಸಾ ಪ್ರವೃತ್ತಿಯು ಕೆಲವುಕಾಲ ತೋರುತಿದ್ದಾಗ್ಯೂ; ರಾಜದಂಡದ ಶಿಕ್ಷೆಯಾಗಲು ಅವನಿಗೆ ಪಶ್ಚಾತ್ತಾಪವೆನಿಸಿ ಹಿಂಸೆಯ ಆವರಣದ ಅಭಾವವಾಗುತ್ತದೆ.

ಸತ್ಯ ಧರ್ಮಪ್ರವೃತ್ತಿಯು ನೈಸರ್ಗಿಕವಾಗಿದ್ದು ಅದರ ಮೇಲೆ ಅನೈಸರ್ಗಿಕ ಭಾವದ ಆವರಣವಾಗಲು, ಅಸತ್ಯದ ಪ್ರತೀತಿಯಾಗಿ ಕೆಲವುಕಾಲ ತೋರುತಿದ್ದಾಗ್ಯೂ; ರಾಜದಂಡದ ಶಿಕ್ಷೆಯಾಗಲು ಪಶ್ಚಾತ್ತಾಪವಾಗಿ ಅಸತ್ಯ ಆವರಣದ ಅಭಾವವಾಗುತ್ತದೆ.

ಅಸ್ತೇಯ ಧರ್ಮಪ್ರವೃತ್ತಿಯು ನೈಸರ್ಗಿಕವಾಗಿದ್ದು; ಅದರಮೇಲೆ ಅನೈಸರ್ಗಿಕ ಭಾವದ ಆವರಣವಾಗಿ, ಸ್ತೇಯ ಪ್ರವೃತ್ತಿಯು ಕೆಲವುಕಾಲ ತೋರುತಿದ್ದಾಗ್ಯೂ; ರಾಜದಂಡದ ಶಿಕ್ಷೆಯ ಮೂಲಕ ಪಶ್ಚಾತ್ತಾಪವಾಗಿ ಸ್ತೇಯಾವರಣದ ಅಭಾವವಾಗುತ್ತದೆ.

ಬ್ರಹ್ಮಚರ್ಯ ಧರ್ಮಪ್ರವೃತ್ತಿಯು ನೈಸರ್ಗಿಕವಾಗಿದ್ದು ಅದರಮೇಲೆ ಅನೈಸರ್ಗಿಕ ಭಾವದ ಆವರಣವಾಗಿ, ವ್ಯಭಿಚಾರ ಪ್ರವೃತ್ತಿಯು ಕೆಲವುಕಾಲ ತೋರುತಿದ್ದಾಗ್ಯೂ; ರಾಜದಂಡದ ಶಿಕ್ಷೆಯಾಗಲು ಪಶ್ಚಾತ್ತಾಪವಾಗಿ ವ್ಯಭಿಚಾರ ಪ್ರವೃತ್ತಿಯ ಆವರಣದ ಅಭಾವವಾಗುತ್ತದೆ.

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವು ನಾಲ್ಕು ನೈಸರ್ಗಿಕ ಧರ್ಮವಾಗಿವೆ.

ಅನೈಸರ್ಗಿಕ ಅನ್ಯಾಯ ಪ್ರವೃತ್ತಿಯಾದ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಇವುಗಳು ಪರರ ವಿಷಯದಲ್ಲಿ ಉಪಯೋಗಿಸಿ, ಅವರಿಗೆ ದುಃಖಿಸಿ, ತಾನು ಸುಖಪಡುವದಕ್ಕಾಗಿ ಮಾತ್ರವಷ್ಟೆ.

ಸ್ವ ಸಂರಕ್ಷಣೆಗೋಸುಗ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮ-ಚರ್ಯ ಇವು ನಾಲ್ಕು ಧರ್ಮನಿಯಮಗಳ ಸದಾ ಅಪೇಕ್ಷೆಯಾಗುತ್ತಿದೆ.

ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ನಾಲ್ಕು ಅನೈಸರ್ಗಿಕ ಪ್ರವೃತ್ತಿಗಳು ನಿರೋಧಿಸುವದೇ ಸಂಘರಾಷ್ಟ್ರದ ಮಹದುದ್ದೇಶವಾಗಿದೆ.

ಅನೈಸರ್ಗಿಕ ಪ್ರವೃತ್ತಿಯು ನಿರೋಧಿಸುವದೆಂದರೆ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ನಾಲ್ಕು ಧರ್ಮನಿಯಮಗಳ ಪಾಲ-ನೆಯ ಮೂಲಕ ಸುವ್ಯವಸ್ಥೆ ಮತ್ತು ಶಾಂತಿಸ್ಥಾಪನೆ ಮಾಡುವದು, ಇದು ನ್ಯಾಯಸಂಘದ ಮಹದುದ್ದೇಶವಾಗಿದೆ.

ವಿಶೇಷತಃ ಹಿಂಸಾ, ಅಸತ್ಯ, ಸ್ತೇಯ ಇವು ಮೂರು ನಿರೋಧಿ-ಸುವದು ಕೆಲವಾಂಶ ನ್ಯಾಯಸಂಘಕ್ಕೆ ಸಾಧ್ಯವಾದುದಾಗಿದೆ. ಆದರೆ ವ್ಯಭಿ-ಚಾರ ಪ್ರವೃತ್ತಿಗೆ ನಿರೋಧಿಸುವದು ಅದಕ್ಕೆ ಸಾಧ್ಯವಿಲ್ಲ. ಕಾರಣ ವ್ಯಭಿ-ಚಾರ ಪ್ರವೃತ್ತ ಸ್ತ್ರೀ-ಪುರುಷರು, ಪರರಿಗೆ ಪರಿಚಯವಾಗಬಾರದೆಂಬ ಉದ್ದೇಶಪಟ್ಟು; ತಮ್ಮ ಪ್ರೇಮವನ್ನು ಪ್ರಚ್ಛನ್ನವಾಗಿರಿಸುವರು. ಇದು ಅವರ ಪ್ರೇಮದ ಕೊನೆ ಲಕ್ಷವಾಗಿದೆ. ವ್ಯಭಿಚಾರ ಪ್ರವೃತ್ತಿಯು ಒಂದೇ ಸ್ತ್ರೀ ಅಥವಾ ಪುರುಷನಿಗದು ಸಾಧ್ಯವಿಲ್ಲ. ಇಬ್ಬರೂ ಒಮ್ಮನಸ್ಸಿನಿಂದ ಮಾಡತಕ್ಕ ವಿಷಯವಾಗಿದೆ. ಒಂದು ಪಕ್ಷ ಸ್ತ್ರೀಯಳ ಒಪ್ಪಿಗೆ ಇರದಿದ್ದಲ್ಲಿ? ಅವಳು ತನ್ನ ಸ್ತ್ರೀತ್ವ ರಕ್ಷಣೆಗೆ ಪರತಂತ್ರಳಾದರಿಂದ, ಪುರುಷನು ಬಲತ್ಕಾರ

ಪೂರ್ವಕ ಸಂಭೋಗಸುಖ ಪಡೆಯಲು; ಆ ಅನ್ಯಾಯ ಪ್ರವೃತ್ತಿಯು ವಿಚಾರಣೆಗೆ ನ್ಯಾಯಸಂಘಕ್ಕೆ ಅವಳು ಗಮಿಸುತ್ತಲೇ ಅದರ ವಿಚಾರವು ಮಾಡಲ್ಪಡುವದು. ಮಾತ್ರ ಒಮ್ಮನಸ್ಸಿನಿಂದ ಆಚರಿಸಲ್ಪಡುವ ಸ್ತ್ರೀ-ಪುರುಷರ ವ್ಯಭಿಚಾರ ಪ್ರವೃತ್ತಿಯನ್ನು ನಿರೋಧಿಸುವದು, ನ್ಯಾಯಸಂಘಕ್ಕೆ ಸಾಧ್ಯವಿಲ್ಲ.

ಕೇವಲ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಇವುಗಳ ನಿರೋಧ ಮೂಲಕವೇ ಜಗತ್ತಿನ ಶಾಂತಿಸ್ಥಾಪನ ಕಾರ್ಯವು ಸಾಧ್ಯ-ವಾಗದುದಿಲ್ಲ.

ಮಾನವನು ಅನ್ಯಾಯ ಪ್ರವೃತ್ತಿಯಲ್ಲಿ ಸೇರಿ, ಸಾರ್ವತ್ರಿಕ ಸುಖ-ಶಾಂತಿಗೆ ಭಂಗ ತರುವವನಾಗುತ್ತಾನೆ. ಅಶಾಂತತೆಯ ಮೂಲೋಚ್ಛೇದ-ವಾಗಬೇಕಾದರೆ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ನಾಲ್ಕು ಧರ್ಮ ನಿಯಮಗಳ ಸಪ್ರಯೋಗಿಕ ಶಿಕ್ಷಣವು ರಾಷ್ಟ್ರದ ಪ್ರಜರಿಗೆ ಕೊಟ್ಟು, ಸುಪ್ರಜರ ನಿರ್ಮಾಣವಾಗಿ, ಸುಶಾಸನ ಪದ್ಧ-ತಿಯು ವ್ಯವಹಾರದಲ್ಲಿ ತರಬೇಕಾಗಿದೆ.

ಮಳೆಗಾಲದ ಸ್ವಾಭಾವಿಕ ನೀರು ಸದಾವಕಾಲದಲ್ಲಿ ಉಪಯೋ-ಗಿಸಿ ಜೀವಿಸಲು ಸಾಧ್ಯವಿಲ್ಲೆಂದರಿತು, ಕೆರೆ, ಬಾವಿ, ಹೊಂಡ, ಆಣೆಕಟ್ಟಿನ ಯೋಜನೆಗಳು ಕಲ್ಪಿಸಿರುವನು. ಮತ್ತೆ ನಿತ್ಯದ ಸ್ನಾನಪಾನಾದಿಗಳ ಉಪ-ಭೋಗಕ್ಕಾಗಿ ಆ ಜಲದ ಉಪಯೋಗ ವಾಗುವದಿಲ್ಲವೆಂದರಿತು; ಮಣ್ಣಿನ ಮತ್ತು ಧಾತುವಿನ ಚಿಕ್ಕ, ಪುಟ್ಟ ಪಾತ್ರೆಗಳು ನಿರ್ಮಿಸಿರುವನು. ಅದರಂ-ತೆಯೇ ಮಾನವನಲ್ಲಿ ಜನ್ಮಸಿದ್ಧ ಸ್ವಾಭಾವಿಕವಾಗಿರುವ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವುಗಳಷ್ಟೇ ರಾಷ್ಟ್ರದ ವ್ಯಾಪಕ ಸುಖ-ಶಾಂತಿಗೆ ಪೂರಕವಾಗಿರದೆ; ಅವುಗಳಿಗೆ ಶಿಕ್ಷಣ ಮೂಲಕ ವಿಕಾಸಪಡಿಸುವ ಧರ್ಮ-ಪೀಠಗಳೂ, ಗುರುಕುಲಾಶ್ರಮಗಳೂ, ಸಹ ಅವಶ್ಯಕವಾಗಿ ಬೇಕಾಗಿವೆ.

ಜಗತ್ತಿನ ಯಾವತ್ತು ರಾಷ್ಟ್ರಗಳಲ್ಲಿ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ಅನೈಸರ್ಗಿಕ ಪ್ರವೃತ್ತಿಗಳು ದಿನೇ ದಿನೆ ಹೆಚ್ಚಾಗಿ, ನ್ಯಾಯ ಸಂಘದ ಗಮನಕ್ಕೆ ಬಾರದೇ ಇರುವ ಅಗಣಿತ ಅಪರಾಧಗಳು ಅಹರ್ನಿಶಿ ಸಾಗುತ್ತಲಿವೆ. ಕಾರಣ ಯಾವತ್ತು ರಾಷ್ಟ್ರಗಳು ಧರ್ಮವನ್ನಾಶ್ರಯಿಸಿ ಸುವ್ಯವಸ್ಥೆ ಮತ್ತು ಶಾಂತಿಸ್ಥಾಪನೆಗಾಗಿ; ಕೇವಲ ಸೈನ್ಯ ಬಲದ ಉಪಯೋಗ ಮಾಡುತ್ತಿರುವವೇ ಹೊರತು ಬೇರೊಂದಿಲ್ಲ.

ರಾಷ್ಟ್ರಗಳು ಧರ್ಮವನ್ನಾಶ್ರಯಿಸಿ ಪ್ರಜರ ನೈತಿಕ ಮಟ್ಟವ ಶಿಕ್ಷಣಮೂಲಕ ಉಚ್ಚಸ್ತರಕ್ಕೆ ಗಮಿಸದ ವಿನಃ ಜಗತ್ತಿಗೆ ಸುಖ-ಶಾಂತಿಯು ಲಭಿಸುವದು ಸಾಧ್ಯವಾದುದಿಲ್ಲ.

ಮಾನವನ ಉತ್ಪತ್ತಿ, ಸ್ಥಿತಿ ಮೊದಲಾದ ಎಲ್ಲ ಕಾರ್ಯಗಳು ಧರ್ಮದಿಂದಲೇ ಸಾಗುತ್ತಲಿವೆ. ಧರ್ಮಶಿಕ್ಷಣದ ಅಭಾವ ಮೂಲಕ ಚೌರ್ಯ, ಹಿಂಸಾದಿ ಅಮಾನುಷ ಕೃತಿಗಳ ಪ್ರಭಾವವು ಬೆಳೆದು; ರಾಷ್ಟ್ರದಲ್ಲಿ ಮಾನವರ ಅಸ್ತಿತ್ವವು ಉಳಿಯದೆ ಮಾನವ ಹೆಸರಿನದೊಂದು ಪಶು-ಪ್ರಾಣಿಗಳ ರಾಷ್ಟ್ರವಾಗುವದರಲ್ಲಿ ಸಂದೇಹವಿಲ್ಲ.

ಧರ್ಮಪೀಠಗಳು ರಾಜಾಶ್ರಯದವಿನಃ ಸಮೃದ್ಧಗೊಳ್ಳಲಾರವು. ಅವು ಪ್ರಜರ ಜ್ಞಾನಾಭಿವೃದ್ಧಿಯಲ್ಲಿ, ಪ್ರಾಮುಖ್ಯತೆಯ ಆಧಾರವಾಗಿ ಸು ಪ್ರಜರನ್ನು ನಿರ್ಮಿಸುವದಾಗಿವೆ. ಆದರೆ ರಾಷ್ಟ್ರವು ಸುಪ್ರಜರನ್ನು ಕಾಪಾಡುವದಾಗಿ; ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ದುಷ್ಕೃತಿಗಳಿಂದಾಗುವ ಅಶಾಂತತೆಗೆ ನಿರೋಧಿಸುವದಾಗಿದೆ. ಹೇಗೆ ನದಿಯ ಪ್ರವಾಹವು ಎರಡು ದಂಡೆಯ ಮಧ್ಯಪಾತ್ರಿಯಲ್ಲಿ ಸುರಕ್ಷಿತವಾಗಿ ಸಾಗುವಂತೆ; ಸುಖ-ಶಾಂತಿ ಧ್ಯೇಯಕ್ಕೆ ಗಮಿಸುವ ಮಾನವರ ಜೀವನ ಪ್ರವಾಹವು ಧರ್ಮ ಮತ್ತು ರಾಷ್ಟ್ರ ಇವೆರಡರ ಮಧ್ಯದಲ್ಲಿ ಸುಸಜ್ಜಿತವಾದರೆ, ಅದು ವಿಶ್ವಶಾಂತಿ ಸ್ಥಾಪನೆಯ ಮೂಲ ಧ್ಯೇಯಕ್ಕೆ ಗಮಿಸಿ ತಲುಪುತ್ತದೆ. ಧರ್ಮ ಮತ್ತು ರಾಷ್ಟ್ರ

ಇವೆರಡು ಸಹಗಾಮಿ, ಅನುಗಾಮಿಯಾಗಿ ವರ್ತಿಸದಿದ್ದಲ್ಲಿ; ವಿಶ್ವದ ಸುಖ ಶಾಂತಿಯ ವಿಚಾರವು ನಿಷ್ಫಲವಾಗುವದಲ್ಲದೇ; ಪ್ರಜರಲ್ಲಿ ಕಾಯಭಾವವು ಬೆಳೆದು, ಇಂದ್ರಿಯ ಸುಖವೇ ಅಂತಿಮ ಸುಖವೆಂದು ಭಾವಿಸಿ ಜಡಮತಿ-ಯರಾಗುತ್ತಾರೆ. ವಿಷಯಭೋಗದ ಸುಖವು ಕ್ರಮೇಣ ಹೆಚ್ಚುತ್ತ ಕೇವಲ "ಶಿಶ್ನೋದರ ಪರಾಯಣ"ರಾಗಿ ಧ್ಯೇಯಶೂನ್ಯ ಪಶುಜೀವಿಗಳಾಗುವರು. ಪ್ರಜರು ವಿಷಯಭೋಗದಲ್ಲಿ ಸಂಯಮಿತರಾಗಬೇಕಾದರೆ, ಧರ್ಮದ ಜ್ಞಾನಾಭಿವೃದ್ಧಿಯೇ ಮೂಲಕಾರಣ ವಾಗಿರುವದು.

ಪ್ರಾಚೀನ ಕಾಲದ ಮಾನವನು ತನ್ನ ಮಾನಸಂರಕ್ಷಣೆಗಾಗಿ ವನ-ವೃಕ್ಷದ ದೊಡ್ಡ, ದೊಡ್ಡ ಎಲೆ ತೊಗಟೆಗಳನ್ನು, ಮೃತಪಶುಗಳ ಚರ್ಮವನ್ನು ಉಪಯೋಗಿಸುತ್ತ ಕ್ರಮೇಣ ವಲಕಲ (ನಾರುಬಟ್ಟೆ) ವಸ್ತ್ರಗಳನ್ನು ಉಪ-ಯೋಗಿಸಹತ್ತಿದನು. ಮಾನರಕ್ಷಣೆಗೆ ಅವಶ್ಯಕವಷ್ಟೇ ಉಪಯೋಗಿಸು-ತಿದ್ದು, ಚಳಿ, ಮಳೆ, ಉಷ್ಣತೆಯನ್ನು ಸಹಿಸುವ ಶಕ್ತಿಯು; ತ್ವಗೇಂದ್ರಿಯ ಸ್ಪರ್ಶಧರ್ಮಕ್ಕೆ ಸ್ವಾಭಾವಿಕವಾಗಿರುತಿತ್ತು. ಬರಬರುತ್ತ ವಸ್ತ್ರ ನಿರ್ಮಿಸುವ ವಿಧಾನವು ಹೆಚ್ಚುತ್ತಲೇ; ಮಾನ ರಕ್ಷಣೆಗಲ್ಲದೆ ಶರೀರ ಸಂರಕ್ಷಣೆಗಾಗಿಯೂ ವಸ್ತ್ರದ ಉಪಯೋಗ ವಾಗಹತ್ತಿತು. ವಸ್ತ್ರವು ಸಾಕಷ್ಟು ಉಪಭೋಗ-ಗೊಳ್ಳುತ್ತಿರುವದರಿಂದ; ಶರೀರದಲ್ಲಿ ಅತಿ ಸೂಕ್ಷ್ಮತೆಯಾಗಿ, ಪ್ರಕೃತಿಯೊಳ-ಗಿನ ಚಳಿ, ಮಳೆ, ಉಷ್ಣತೆಗಳು ತ್ವಗೇಂದ್ರಿಯ ಸ್ಪರ್ಶಧರ್ಮಕ್ಕೆ ತಡೆಯದಂ-ತಾದವು. ವಸ್ತ್ರವು ಕೇವಲ ಮಾನರಕ್ಷಣೆಗಲ್ಲದೆ ಶರೀರ ಸಂರಕ್ಷಣೆಗೂ ಹೆಚ್ಚಾಗಿ ಬೇಕಾಗುತ್ತಲಿದೆ.

ಭೌತಿಕ ವಿಜ್ಞಾನದ ಆವಿಷ್ಕಾರ ಮೂಲಕ ವಿವಿಧ ಪ್ರಕಾರದ ವಸ್ತ್ರ-ಗಳು ನಿರ್ಮಿತವಾಗಿ, ಅವುಗಳ ಉತ್ಪಾದನೆಯು ಬಹು ಪ್ರಮಾಣದಲ್ಲಿ ಆಗು-ತಿದ್ದರೂ; ರಾಷ್ಟ್ರದಲ್ಲಿ ವಸ್ತ್ರಗಳ ವಿಪುಲತೆಯಾಗಿ ಅವುಗಳ ಅನಾವಶ್ಯಕತೆಯು ತೋರಿಬರುವದಿಲ್ಲ. ನಾನಾವಿಧ ಬಣ್ಣ, ನಾನಾವಿಧ ಚಿತ್ರಕಲೆ, ನಾನಾವಿಧ ವಸ್ತ್ರಗಳು ನಿರ್ಮಿಸುವ ಕಲ್ಪನೆಯು ವಿಸ್ತೃತವಾಗಿ ಬೆಳೆದು; ಬಹುಮೂಲ್ಯ

ವಸ್ತ್ರಗಳ ಉಪಯೋಗದಲ್ಲಿ ಪ್ಯಾಂಟ, ಕೋಟ, ಶರ್ಟ, ಬುಶರ್ಟ, ಬ್ಲಾವ್ಜ ಬಾಡಿ ಮೊದಲಾದ ನೂರಾರು ವಿಧ ಉಡುಪು ತೊಡುಪುಗಳಲ್ಲಿ ಪ್ರಭೇದ ಗಳಾಗಿ, ವಸ್ತ್ರವು ಶರೀರ ಸೌಂದರ್ಯದ ಸಾಧನೆಯೆಂದು, ಉಪಯೋಗ ವಾಗುತ್ತಿರುವದು.

ಸಾರಾಂಶ:- ಮೊಟ್ಟಮೊದಲು ಲಜ್ಜಾ ಸಂರಕ್ಷಣೆಗಾಗಿ ವನ ವೃಕ್ಷದ ಎಲೆ, ತೊಗಟೆಗಳನ್ನು ಉಪಯೋಗಿಸುವ ಮಾನವನು; ಕ್ರಮೇಣ ಶರೀರ ಸಂರಕ್ಷಣೆ ಹಾಗೂ ಶರೀರ ಸೌಂದರ್ಯ ಸಾಧನೆ ಯೆಂದು, ವಸ್ತ್ರವನ್ನು ಮೂರನೆಯ ತರಗತಿಯಲ್ಲಿ ಉಪಯೋಗಿ ಸುತ್ತಾನೆ. ಸೌಂದರ್ಯ ಸಾಧನೆಯು ಭೂತವು ಬೆನ್ನಟ್ಟಿ ಸಂಪತ್ತಿಯ ಸಂಹಾರ ಕ್ರಮದಲ್ಲಿ ವರ್ತಿಸುತ್ತಿದೆ.

ಭೌತಿಕ ವಿಜ್ಞಾನದ ಮೂಲಕ ರೇಲ್ವೆ, ಮೋಟರ, ಆಕಾಶಯಾನ, ಜಲಯಾನ ಮೊದಲಾದವುಗಳಿಂದ ಪ್ರಯಾಣದ ಸೌಕರ್ಯವಾಗಿ; ಒಂದು ನಿಮಿಷಾರ್ಧದಲ್ಲಿ ಸಾವಿರಾರು ಮೈಲು ಸಂಚರಿಸಬಲ್ಲನು. ತನ್ನ ಜೀವನ ಕ್ಷೇತ್ರವು ಸುಖಮಯ ವಾಗಿರಲೆಂದು ವಿದ್ಯುಚ್ಛಕ್ತಿಯ ಮೂಲಕ ನೀರು ಕಾಯಿಸುವದು, ತೊಳೆಯುವದು, ಅಡಿಗೆ ಮಾಡುವದು, ಮನೆಯ ಕಸ ಗೂಡಿಸುವದು, ತಲೆ ಕಾಯಿಸಿಕೊಳ್ಳುವದು, ಗಾಳಿ ಬೀಸಿಕೊಳ್ಳುವದು, ಕುಟ್ಟುವದು, ಬೀಸುವದು, ಬಟ್ಟೆಗಳನ್ನು ಮಡಿ ಮಾಡುವದು, ತೊಟ್ಟಿಲು ತೂಗುವದು ಮೊದಲಾದವುಗಳ ಉಪಯೋಗವು ಮತ್ತೆ ಕೃಷಿ ವ್ಯವಸಾಯ ದಲ್ಲಿಯ ಊಳುವದು, ಹರಗುವದು, ಬಿತ್ತುವದು, ಪೈರುಗಳಿಗೆ ನೀರುಣಿ ಸುವದು, ದೂರದಲ್ಲಿರುವವರು ಪರಸ್ಪರ ಮಾತಾಡಿಕೊಳ್ಳುವದಕ್ಕೆ ಲೌಡ ಸ್ಪೀಕರ, ಟೆಲಿಫೋನ, ಟೆಲಿಗ್ರಾಮ್, ಮೈಕ್ರೊಫೋನ, ರೇಡಿಯೊ ಮತ್ತು ಟೆಲಿವಿಜನ್ ಮೊದಲಾದವುಗಳ ಉಪಯೋಗ ವಾಗುತ್ತಿರುವದು. ಇವೆಲ್ಲ ಎಷ್ಟು ವಿಧ ಭೋಗೋಪಭೋಗ ಸಾಧನೆಗಳು ಉಪಲಬ್ಧವಾದಾಗ್ಯೂ ಜಗತ್ತಿನ ಯಾವ ರಾಷ್ಟ್ರದಲ್ಲಿಯೂ ಸುಖ-ಶಾಂತಿಯ ಉಸುರೇ ಕಾಣದಾಗಿದೆ!

ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರಕ್ಕೆ ಶತೃಭಾವದಿಂದ ಕಂಡು, ಯಮಗೆ ಅನ್ಯ ಯಾವ ರಾಷ್ಟ್ರದಿಂದಲೂ ಸೋಲು ಆಗಬಾರದೆಂಬ ದೃಢ-ಭಾವವು ಕಲ್ಪಿಸುತ್ತವೆ. ಪ್ರತಿಯೊಂದು ರಾಷ್ಟ್ರವು ಇಡೀ ಜಗತ್ತನ್ನೇ ಗೆದ್ದು ವಿಶ್ವದಲ್ಲಿ ವಿಕ್ರಮ ಸ್ಥಾಪನೆ ಮಾಡುವ ಉದ್ದೇಶಕ್ಕಾಗಿ ಸಿದ್ಧವಾಗಿವೆ. ಮತ್ತೆ ಅನೇಕ ವಿಧ ರಣಗಾಡಿಗಳು, ತೋಫುಗಳು, ಹೈಡ್ರೋಜನ್ ಬಾಂಬುಗಳು ನಿರ್ಮಿಸಿವೆ. ಪರಸ್ಪರ ರಾಷ್ಟ್ರಗಳ ದ್ವೇಷಾಸೂಯ ಸಂಘರ್ಷ ಮೂಲಕ ಮಹಾಯುದ್ಧವಾಗಿ ಪಶು-ಪಕ್ಷಿ, ವೃಕ್ಷ-ವಲ್ಲರಿ ಸಹವಾಗಿ ಮಾನವರ ಸಂಹಾ-ರವಾಗುವ ಒಂದೇ ಧ್ಯೇಯಕ್ಕಾಗಿ ಸಹಾಸ ಪಡುವದಾದರೆ, ಇವೆಲ್ಲ ಈಗಿನ ಬಹಿರ್ ಸುಧಾರಣೆಗಳು! ಇಂತಹ ಸುಧಾರಣೆಯಲ್ಲಿ ಎಷ್ಟು ಪ್ರಗತಿಯಾದರೂ ಭೋಗದಲ್ಲಿಯ ಮನವು ತೃಪ್ತಿಯಾಗುವದು ಸಾಧ್ಯವಿಲ್ಲ. ತುಪ್ಪವು ಅಗ್ನಿ-ಯಲ್ಲಿ ಚಲ್ಲಲು ಅದು ಪ್ರಜ್ವಲಿಸುವಂತೆಭೋಗಲಾಲಸೆಯು ಅತಿಯಾಗಿ ಬೆಳೆದು ಭಾವವು ಜಡವಾಗಿ ಕಾಮ, ಕ್ರೋಧ, ಲೋಭ, ಮದ, ಮೋಹ, ಮಾತ್ಸರ್ಯ ಈ ದುರ್ಗುಣಗಳಿಂದ ಮಾನವನುಅಸಂಯಮಿಯಾಗುತ್ತಾನೆ. ಮತ್ತೆ ಭೋಗ ಪದಾರ್ಥಗಳ ಅಭಾವ ಮೂಲಕ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ಪಾಪಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ. ಹೀಗೆ ಈ ದುಷ್ಕೃತಿಗಳಿಂದ ಅಶುಚಿ, ಅನಿತ್ಯ, ಅನಾತ್ಮ, ಅಸುಖಗಳಲ್ಲಿ ಕ್ರಮೇಣ ಶುಚಿ, ನಿತ್ಯ, ಆತ್ಮ, ಸುಖ ಇವುಗಳ ಭ್ರಾಂತಿಯಾಗಿ ತನುವ್ಯಸನ, ಸ್ತ್ರೀವ್ಯಸನ, ಅನ್ನ ವ್ಯಸನ, ದ್ರವ್ಯವ್ಯಸನ, ಸೇವಕ ವ್ಯಸನ ಮುಂತಾದ ವ್ಯಸನಗಳಲ್ಲಿ ಹಸಗೆಟ್ಟು, ಕುಲ, ಬಲ, ಧನ, ರೂಪ, ಯೌವನ, ರಾಜ್ಯ, ಏಳಿಗೆ. ಎಂಬಿವುಗಳಿಂದ ಕೊಬ್ಬಿ, ಪ್ರತಿಯೊಬ್ಬ ಮಾನವನಲ್ಲಿ ನಾನೇ ಶ್ರೇಷ್ಠನೆಂಬ ಅಹಂಭಾವವು ಬೆಳೆದು; ಪರಸ್ಪರ ಮಾನವರಲ್ಲಿ ಪೂಜ್ಯ-ಪೂಜಕ ಭಾವವು ನಷ್ಟವಾಗಿ, ನಾಸ್ತಿಕನಾ-ಗುವನು. ಬೇಸಿಗೆಯ ಅತಿ ಉಷ್ಣತೆಯ ಮೂಲಕ ನದಿಗಳು ದಿನೇ ದಿನೆ ಕ್ರಮೇಣ ಬತ್ತುವಂತೆ; ಮಾನವ ಸಮಾಜದಲ್ಲಿ ಪ್ರೇಮವು ಬತ್ತುತ್ತಿರುವದು. ಮಾನವನಲ್ಲಿರುವ ಸ್ವಾಭಾವಿಕ ಪ್ರೇಮವು ಅವನ ಯಾವಜ್ಜೀವನ ಸುಖ-ಶಾಂತಿಗೆ ಅಪೂರ್ಣತೆ ಯಾಗಿರುವದು. ಪಿತಾ-ಪುತ್ರ, ಮಾತಾ-ಪುತ್ರ,

ಅತ್ತೆ-ಸೊಸೆ, ಅಣ್ಣ-ತಮ್ಮ, ಗುರು-ಶಿಷ್ಯ, ಪತಿ-ಪತ್ನಿ, ರಾಜಾ-ಪ್ರಜಾ, ಸ್ವಾಮಿ-ಸೇವಕರು ಪರಸ್ಪರ ಪ್ರೇಮವಿಲ್ಲದವರಾಗಿ, ಅವರ ಪ್ರೇಮವು ಸ್ವಾರ್ಥ ಪ್ರವೀಣವಾಗಿದೆ. ಇದರಿಂದ ಸನ್ಮಾನಿತ ಜನಗಳ ಜೀವನ ನಿರ್ವಹಣಕ್ಕೆ ಕಷ್ಟ-ಪ್ರದವಾಗುವದು.

ಭೌತಿಕ ಜಡವಿಜ್ಞಾನದ ವಿಶ್ಲೇಷಣೆಯಲ್ಲಿ ಮಾನವನ ಮನತೊಡಗಿ ಜಡ ಪರಮಾಣುಗಳ ಸಂಸ್ಕಾರಗೊಂಡು ಭೋಗಲೋಲುಪತೆಯೇ ಇವನ ಚರಮ (ಕೊನೆ) ಲಕ್ಷವಾಗಿದೆ. ತಾನು ಸುಖಿಯಾಗಿರಬೇಕೆಂಬುದೇ ಇವನ ಗುರಿ. ತಾನು ಸುಖಿಯಾಗಬೇಕಾದರೆ ತನ್ನ ನೆರೆ, ತನ್ನ ಊರು, ತನ್ನ ರಾಷ್ಟ್ರ ಎಲ್ಲೆಲ್ಲಿಯೂ ಸುಖವು ವ್ಯಾಪಿಸಲು ತನಗೂ ಸುಖ ಉಂಟಾಗುವದು. ಅರ್ಥಾತ್ ವ್ಯಷ್ಟಿರೂಪ ಜೀವನ ಸುಖಕ್ಕೆ ಸಮಷ್ಟಿರೂಪ ವಾತಾವರಣವು ಸುಖಮಯ ವಾಗಿರುವದು ಅತ್ಯಾವಶ್ಯಕವಾಗಿರುವದು.

ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ಅನೈಸರ್ಗಿಕ ದುಷ್ಕೃತಿಗಳಿಂದಲೇ ರಾಷ್ಟ್ರದಲ್ಲಿ ಪಾಪಕರ್ಮಗಳು ಸಂಭವಿಸುತ್ತವೆ.

ಹಿಂಸಾ:- ಮಾತೃಹತ್ಯ, ಪಿತೃಹತ್ಯ, ಗುರುಹತ್ಯ, ರಾಜಹತ್ಯ, ಮಂತ್ರಿಹತ್ಯ, ಶಿಷ್ಯಹತ್ಯ, ಸೇವಕಹತ್ಯ, ರಾಷ್ಟ್ರ ಕರ್ಮಚಾರಿಹತ್ಯ, ಸ್ತ್ರೀಹತ್ಯ, ಪತ್ನಿಹತ್ಯ, ಪತಿಹತ್ಯ, ಬಂಧುಹತ್ಯ, ಭಗಿನಿಹತ್ಯ, ಮಿತ್ರಹತ್ಯ, ಪಥಿಕಹತ್ಯ, ನಿದ್ರಿಸ್ತಹತ್ಯ, ಕುರುಡಹತ್ಯ, ಕುಂಟಹತ್ಯ, ಮೂಕಹತ್ಯ, ಬಾಲಹತ್ಯ, ಪುತ್ರಹತ್ಯ, ಪುತ್ರಿಹತ್ಯ, ಶಿಶುಹತ್ಯ, ಸ್ವಾಮಿಹತ್ಯ, ಗರ್ಭಹತ್ಯ ಅತಿಥಿಹತ್ಯ, ಯೋಗಿಹತ್ಯ, ದೇಶಭಕ್ತಹತ್ಯ ಮತ್ತೆ ಗೋ-ವೃಷಭ ಪಶು-ಪಕ್ಷ್ಯಾದಿಗಳ ಹತ್ಯವು ಹೀಗೆ ಒಂದೇ ಹಿಂಸೆಯು ಇಪ್ಪತ್ತೊಂದು ಲಕ್ಷ ಪ್ರಕಾರವಾಗಿರುತ್ತದೆ.

ಅಸತ್ಯ: ತಾಯಿಯೊಡನೆ ಅಸತ್ಯಭಾಷಣ, ತಂದೆಯೊಡನೆ ಅಸತ್ಯ, ಗುರುವಿನೊಡನೆ ಅಸತ್ಯ, ರಾಜನೊಡನೆ ಅಸತ್ಯ, ಮಂತ್ರಿಯೊಡನೆ

ಅಸತ್ಯ, ಸೇವಕನೊಡನೆ ಅಸತ್ಯ, ರಾಷ್ಟ್ರದ ಅಧಿಕಾರಿ ವರ್ಗದೊಡನೆ ಅಸತ್ಯ, ಸ್ತ್ರೀಪುರೊಡನೆ ಅಸತ್ಯ, ಪತ್ನಿಯೊಡನೆ ಅಸತ್ಯ, ಪತಿಯೊಡನೆ ಅಸತ್ಯ, ಅಬಲೆಯೊಡನೆ ಅಸತ್ಯ, ವಿಧವೆಯೊಡನೆ ಅಸತ್ಯ, ಭಗಿನಿಯೊಡನೆ ಅಸತ್ಯ, ಬಂಧುಜನರೊಡನೆ ಅಸತ್ಯ, ಮೂಕನೊಡನೆ ಅಸತ್ಯ, ಕಿವುಡನೊಡನೆ ಅಸತ್ಯ, ಕುರುಡನೊಡನೆ ಅಸತ್ಯ, ಕುಂಟನೊಡನೆ ಅಸತ್ಯ, ಬಾಲನೊಡನೆ ಅಸತ್ಯ, ವೃದ್ಧನೊಡನೆ ಅಸತ್ಯ, ನ್ಯಾಯಾಧೀಶನೊಡನೆ ಅಸತ್ಯ, ಮಿಥ್ಯಾ-ಸಾಕ್ಷಿ ಹೀಗೆ ಒಂದೇ ಅಸತ್ಯ ಭಾಷಣವು ಇಪ್ಪತ್ತೊಂದು ಲಕ್ಷ ಪ್ರಕಾರದಾಗಿ-ರುತ್ತದೆ.

**ಸ್ತೇಯ** (ಕಳವು):- ಮಾತೃ ಧನಸ್ತೇಯ, ಪಿತೃ ಧನಸ್ತೇಯ, ಆಚಾರ್ಯ ಧನಸ್ತೇಯ, ದೇವತಾ ಧನಸ್ತೇಯ, ರಾಷ್ಟ್ರ ಧನಸ್ತೇಯ, ರಾಜ ಧನಸ್ತೇಯ, ಮಂತ್ರಿ ಧನಸ್ತೇಯ, ಬಾಲ ಧನಸ್ತೇಯ, ವೃದ್ಧ ಧನಸ್ತೇಯ, ಮೂಕ ಧನಸ್ತೇಯ, ಕಿವುಡ ಧನಸ್ತೇಯ, ಕುರುಡ ಧನಸ್ತೇಯ, ಕುಂಟ-ಧನಸ್ತೇಯ, ರೋಗಿ ಧನಸ್ತೇಯ, ಸ್ತ್ರೀ ಧನಸ್ತೇಯ, ಪತ್ನಿ ಧನಸ್ತೇಯ, ಪತಿ ಧನಸ್ತೇಯ, ಅಬಲೆ ಧನಸ್ತೇಯ, ವಿಧವೆ ಧನಸ್ತೇಯ, ಸಾಧು-ಧನಸ್ತೇಯ, ಯೋಗಿ ಧನಸ್ತೇಯ, ಭಗಿನಿ ಧನಸ್ತೇಯ, ಬಂಧು ಧನಸ್ತೇಯ, ಮಿತ್ರ ಧನಸ್ತೇಯ, ಪಥಿಕ ಧನಸ್ತೇಯ, ನಿದ್ರಿಸ್ತ ಧನಸ್ತೇಯ, ಸೈನಿಕ ಧನಸ್ತೇಯ, ಶಿಕ್ಷಕ ಧನಸ್ತೇಯ, ಸಂಘ ಸಂಸ್ಥೆಯ ಧನಸ್ತೇಯ ಹೀಗೆ ಒಂದೇ ಸ್ತೇಯ (ಕಳವು) ವು ಇಪ್ಪತ್ತೊಂದು ಲಕ್ಷ ಪ್ರಕಾರದಾಗಿರುತ್ತದೆ.

**ವ್ಯಭಿಚಾರ**:- ಮಾತೃಗಮನ, ಭಗಿನಿಗಮನ, ಸೊಸೆಗಮನ, ಪುತ್ರಿಗಮನ, ಬಂಧು ಪತ್ನಿಗಮನ, ಮಿತ್ರ ಪತ್ನಿಗಮನ, ಗುರುಪತ್ನಿಗಮನ, ಶಿಕ್ಷಕ ಪತ್ನಿಗಮನ, ಶಿಷ್ಯ ಪತ್ನಿಗಮನ, ಸೇವಕ ಪತ್ನಿಗಮನ, ಪಥಿಕಸ್ತ್ರೀ-ಗಮನ, ನಿದ್ರಿಸ್ತ ಸ್ತ್ರೀಗಮನ, ವ್ರತಸ್ತ ಸ್ತ್ರೀಗಮನ, ರಾಜಪತ್ನಿಗಮನ, ಮಂತ್ರಿ ಪತ್ನಿಗಮನ, ಸ್ವಾಮಿ ಪತ್ನಿಗಮನ, ಪತಿವ್ರತಾಗಮನ, ವಿಧವೆಗಮನ, ಮೂಕ ಸ್ತ್ರೀಗಮನ, ಕಿವುಡ ಸ್ತ್ರೀಗಮನ, ಕುಂಟ ಸ್ತ್ರೀಗಮನ, ರೋಗಿ

ಸ್ತ್ರೀಗಮನ, ಯೋಗಿಣಿ ಸ್ತ್ರೀಗಮನ, ಸೈನಿಕ ಪತ್ನಿಗಮನ, ವೃದ್ಧ ಸ್ತ್ರೀ-
ಗಮನ ಹೀಗೆ ಒಂದೇ ವ್ಯಭಿಚಾರವು ಇಪ್ಪತ್ತೊಂದು ಲಕ್ಷ ಪ್ರಕಾರದಾಗಿ-
ರುತ್ತದೆ.

ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ನಾಲ್ಕು ಅನೈ-
ಸರ್ಗಿಕ ದುಷ್ಕೃತಿಗಳಲ್ಲಿ ಜಾತಿಭೇದ, ವಯೋಭೇದ, ಅವಸ್ಥಾಭೇದ
ಹೀಗೆ ಜೀವರುಗಳ ವಿವಿಧ ತಾರತಮ್ಯ ಭೇದದನುಗುಣವಾಗಿ ಒಟ್ಟು-
ಗೂಡಿಸಿ ಎಂಬತ್ತುನಾಲ್ಕು ಲಕ್ಷ ಪ್ರಕಾರದ ಪಾಪಕರ್ಮಗಳು ಉತ್ಪ-
ತ್ತಿಯಾಗುತ್ತವೆ.

ಮಾನವನ ಅಗಣಿತ ಅನಿರ್ಣಿತ ಅಪರಾಧಗಳು ನ್ಯಾಯ ಶಾಸನದ
ದಂಡಕ್ಕೆ ಒಳಪಟ್ಟು, ಶಿಕ್ಷೆಯನ್ನನುಭವಿಸದೆ ಗುಪ್ತವಾಗಿಯೇ ಅವು ಸೂಕ್ಷ್ಮ
ಪ್ರಾಣಸೃಷ್ಟಿಯಲ್ಲಿ ಸಂಗ್ರಹ ವಾಗಿರುತ್ತವೆ. ಸೃಷ್ಟಿಯು ನ್ಯಾಯಪರ,
ನಿಯಮಾಧೀನ, ಸರ್ವನ್ಯಾಯಿಯಾದುದರಿಂದ ಕೆಲವು ಅಪರಾಧಿಗಳು ನ್ಯಾಯ
ದಂಡಕ್ಕೆ ಒಳಪಟ್ಟು ಶಿಕ್ಷೆಯನ್ನನುಭವಿಸುವದು, ಮತ್ತೆ ಕೆಲವು ಅಪರಾಧಿ
ಜನಗಳ ಅಪರಾಧಕ್ಕೆ ನ್ಯಾಯದಂಡದ ಶಿಕ್ಷೆಯಾಗದಿರುವದು ಇದು ವಿಷಮ-
ವಾಗುತ್ತದೆ. ಕಾರಣ ಇಹಲೋಕದ ನ್ಯಾಯಾಧೀಶನು ಕಿಂಚಿಜ್ಞ, ಕಿಂಚಿ-
ತ್ಕರ್ತೃವಾದರಿಂದ ಎಲ್ಲ ಜನಗಳ ಅಪರಾಧಕ್ಕೆ ಪೂರ್ಣ ಶುದ್ಧ ನ್ಯಾಯ ದೊರೆ-
ಯುವದು ಸಾಧ್ಯವಿಲ್ಲದಾಗಿದೆ.

ಈ ಲೋಕದ ರಾಜದಂಡಕ್ಕೆ ವಂಚಿಸಿ ಉಳಿದ ಅಸಂ-
ಖ್ಯಾಂಕ ಸಹಕರ್ಮಿ ಅಪರಾಧಿಗಳಾಗಲು, ಆ ಪಾಪೀ ಜೀವರುಗಳ
ಪಾಪಕ್ಷಾಲನಾರ್ಥ, ಪ್ರಾಯಶ್ಚಿತ್ತಕ್ಕಾಗಿ, ಪ್ರಕೃತಿ (ಸೃಷ್ಟಿ) ಯಲ್ಲಿ
ವಿಕೃತಿಯುಂಟಾಗಿ ವಿಶೇಷ ವಿಕೋಪವಾಗುತ್ತದೆ.

ಅತಿವೃಷ್ಟಿ, ಅನಾವೃಷ್ಟಿ, ಅಕಾಲವೃಷ್ಟಿ, ವಿಷವೃಷ್ಟಿ, ಅತಿ-
ಹಿಮ, ಅಹಿಮ, ಅತಿಗ್ರೀಷ್ಮ, ಅಗ್ರೀಷ್ಮ, ಸಿಡಿಲು, ಭೂಕಂಪ,

ಝಂಝಾವಾತ, ಚಕ್ರವಾತ, ಯುದ್ಧ, ಕ್ಷಾಮ, ಸಾಂಕ್ರಮಿಕಾದಿ ಮಹಾ ಮಹಾ ರೋಗಗಳು ಸಂಭವಿಸುತ್ತವೆ.

ಸುವೃಷ್ಟಿ:- ಕಾಲಕಾಲಕ್ಕೆ ತಕ್ಕ ಮಳೆಯಾಗಿ ಹೊಳೆ, ಹಳ್ಳ, ಕೆರೆ, ಬಾವಿಗಳು ಜಲದಿಂದ ತುಂಬಿ ರಾಷ್ಟ್ರದ ಎಲ್ಲ ಜೀವಿಗಳ ರಕ್ಷಣೆಗೆ ಜಲದಾನ ಮಾಡುತ್ತಿದೆ. ಪೈರುಗಳು ಸಮೃದ್ಧಿಯಾಗಿ ಪತ್ರ, ಪುಷ್ಪ, ಫಲ, ಮೂಲ, ಧಾನ್ಯಾದಿಗಳಿಂದ ಸುಪ್ರಜರನ್ನು ಸಂತೃಪ್ತಿ ಪಡಿಸುತ್ತಿದೆ. ಗೋ, ವೃಷಭಾದಿ ಪಶುಗಳು, ತೃಣ, ಪರ್ಣಾದಿಗಳನ್ನು ಯಥೇಚ್ಛವಾಗಿ ಸೇವಿಸಿ ದೃಢಕಾಯಿ-ಗಳಾಗಿ ಮಾನವರ ಸಂರಕ್ಷಣೆಗೆ ಎಲ್ಲ ವಿಧ ಸೇವೆ ಸಲ್ಲಿಸುತ್ತವೆ. ಮಾತ್ರ ಪ್ರಕೃತಿಯು ವಿಕೋಪವಾಗಲು; ಈ ನಾಲ್ಕು ವಿಧವಾಗಿ ಪೀಡಿಸುತ್ತದೆ.

ಅತಿವೃಷ್ಟಿ:- ಭಯಂಕರ ಮಳೆಯಾಗಿ ಸರ್ವ ಪೈರುಗಳು ಕೊಳೆತು ನಾಶವಾಗುತ್ತವೆ. ಕೆರೆ, ಬಾವಿ, ಆಣೆಕಟ್ಟು, ನದಿ ಮೊದಲಾದವುಗಳು ಜಲದಿಂದ ಉಕ್ಕೇರಿ ನಗರ, ಪಟ್ಟಣ, ಶಿಬಿರ, ಆಶ್ರಮ, ಗ್ರಾಮ ಮೊದಲಾದ ಜನವಸತಿಗಳು ವಿಶೇಷ ಜಲಪ್ರವಾಹ ಮೂಲಕ ನಾಶವಾಗಿ ಮಾನವ ಸಮಾ-ಜವು ಮೃತ್ಯುಮುಖಿಯಾಗುತ್ತದೆ.

ಅನಾವೃಷ್ಟಿ:- ಮಳೆಯಾಗದೆ ಸರ್ವ ವನಸ್ಪತಿಗಳು ಒಣಗಿ, ಫಲ, ಮೂಲ, ಅನ್ನ, ಧಾನ್ಯಾದಿಗಳ ಅಭಾವವಾಗುತ್ತದೆ. ಕೆರೆ, ಬಾವಿ, ಆಣೆ-ಕಟ್ಟು, ನದಿ ಮೊದಲಾದ ಜಲಾಶಯಗಳು ನಿರ್ಜಲವಾಗಿ ತೋಟ ಗದ್ದೆ-ಗಳಲ್ಲಿ ಬರುವ ಪುಷ್ಪ, ಫಲ, ಮೂಲ, ಧಾನ್ಯಾದಿಗಳು ಒಣಗುತ್ತವೆ. ತೃಣ-ಪರ್ಣವು ಒಣಗಿ; ಗೋ ಮೊದಲಾದ ಪಶುಗಳಿಗೆ ಖಾದ್ಯದ ಅಭಾವ ಮೂ-ಲಕ ಹಾಲು ಕರೆಯುವದಿಲ್ಲ. ಎತ್ತು ಮೊದಲಾದ ಶ್ರಮಿಕ ಪಶುಗಳಿಗೆ ಅನ್ನಾಭಾವವಾಗಿ ಊಳುವದರಲ್ಲಿ ಅಸಮರ್ಥವಾಗುತ್ತವೆ.

ವಿಷವೃಷ್ಟಿ :- ಉತ್ತಮ ಪಯಿರುಗಳಿಗೆ ನಾನಾವಿಧ ರೋಗ ಜಂತುಗಳ ಉತ್ಪತ್ತಿಯಾಗಿ; ಖಾದ್ಯ ವನಸ್ಪತಿಗಳು ನಾಶಹೊಂದುತ್ತವೆ.

ಅಕಾಲವೃಷ್ಟಿ :- ಮಳೆಯು ಬೇಕಾಗದಿರುವ ಸಮಯದಲ್ಲಿ ಮ-ಳೆಯಾಗಿ; ಬೆಳೆದ ಅನ್ನಧಾನ್ಯಗಳಿಗೆ, ತೋಯಿಸಿ ಕೊಳೆಯಿಸಿ, ನಾಶಪಡಿ-ಸುತ್ತದೆ.

ಹಿಮಕಾಲ :- ಚಳಿಯು ಪ್ರಾಣಿಗಳ ಮತ್ತು ಫಲ, ಮೂಲ, ಅನ್ನ ಧಾನ್ಯಾದಿ ವನಸ್ಪತಿಗಳ ಅಭಿವೃದ್ಧಿಯಲ್ಲಿ ಸರ್ವವಿಧ ಸಹಾಯಕವಾಗಿ ಸಂವರ್ಧಿಸಿ, ಸಂರಕ್ಷಿಸುತ್ತದೆ. ಅದೇ ಪ್ರಕೃತಿಯಲ್ಲಿ ವಿಕೃತಿವುಂಟಾಗಲು ಎರಡು ವಿಧವಾಗಿ ಸರ್ವಜೀವಿಗಳಿಗೆ ಪೀಡಿಸುತ್ತದೆ.

ಅತಿಹಿಮ :- ಭಯಂಕರ ಚಳಿಯಾಗಿ ಫಲ ಮೂಲಾದಿ ವನಸ್ಪ-ತಿಗಳನ್ನು ನಾಶಪಡಿಸುತ್ತದೆ. ಮಾನವ ಸಮಾಜವು ಮೃತ್ಯುಮುಖಿಯಾ-ಗುತ್ತದೆ.

ಅಹಿಮ : ಎಷ್ಟೂ ಚಳಿಯಾಗದೆ ಇದ್ದು, ಸರ್ವ ವನಸ್ಪತಿ-ಗಳಿಗೆ ನಾನಾವಿಧ ರೋಗಕ್ರಿಮಿಗಳ ಉಪದ್ರವವಾಗಿ; ಅನ್ನೌಷಧಿಗಳ ಅಭಾ-ವವಾಗುತ್ತದೆ.

ಗ್ರೀಷ್ಮಕಾಲ :- ಬೇಸಿಗೆಯ ಬಿಸಿಲಿನ ತಾಪವು ಚರಾಚರ ಎಲ್ಲ ಜೀವಿಗಳ ಪ್ರಾಣರಕ್ಷಣೆಗೆ ಅಮೃತಪ್ರಾಯವಾಗಿದ್ದು; ನಾನಾವಿಧ ರೋಗ-ಜಂತುಗಳ ಪರಿಹಾರಕವಾಗಿದೆ. ಪಶು, ಪಕ್ಷಿ, ಮಾನವಾದಿ ಎಲ್ಲ ಜೀವಿಗಳ ಪ್ರಾಣರಕ್ಷಣೆಗೆ ತನ್ನ ತಪ್ತಕಣಗಳನ್ನು ದಯಪಾಲಿಸಿ; ಸಕಲವಿಧ ಆರೋ-ಗ್ಯದಿಂದ ಸಂರಕ್ಷಿಸುತ್ತದೆ. ಮತ್ತೆ ವಾಯು ಮಂಡಲವನ್ನು ಪರಿಶುದ್ಧಗೊ-ಳಿಸುತ್ತದೆ. ಭೂವಿಯು ಬಂಜೆತನವನ್ನನುಭವಿಸದೆ, ಸಕಲವಿಧ ವನಸ್ಪತಿಗಳ-ನ್ನು ಉದಯಿಸಿ ಸಂರಕ್ಷಿಸಲು ಸಮರ್ಥಮಾಡುತ್ತದೆ.

ಅತಿಗ್ರೀಷ್ಮ :- ಅತಿ ಬಿಸಿಲಿನ ತಾಪದಿಂದ ಕೆರೆ, ಬಾವಿ, ನದಿ, ಅಣೆಕಟ್ಟು, ಬತ್ತಿ; ತೋಟ, ಗದ್ದೆಗಳಲ್ಲಿರುವ ಪೈರುಗಳು ಜಲಾಭಾವವಾಗಿ

ಒಣಗುತ್ತವೆ. ಮತ್ತೆ ವಿಶೇಷ ತಾಪಮೂಲಕ ಮಾನವ ಸಮಾಜವು ಮಡಿಯುತ್ತದೆ.

**ಅಗ್ರೀಷ್ಮ :-** ಬಿಸಿಲಿನ ಅಭಾವ ಮೂಲಕ, ಭೂಮಿಯು ತಪ್ತವಾಗದಿರುವ ಕಾರಣ; ಉಷ್ಣಕಣಗಳು ಕಡಿಮೆಯಾಗಿ ಅದು ಫಲವತ್ತಾಗದೆ ಬಂಜೆಯಾಗುತ್ತದೆ. ವಿವಿಧ ರೋಗಗಳ ಉಪದ್ರವು ಹೆಚ್ಚಾಗಿ ಮಾನವಾದಿ ಸಕಲ ಪ್ರಾಣಿಗಳು ಸಾಯುತ್ತವೆ.

**ಸಿಡಿಲು :-** ಆಕಾಶದಲ್ಲಿಯ ಮೇಘಗಳ ಸಂಘರ್ಷಣೆ ಮೂಲಕ ಉಂಟಾಗುವ ವಿದ್ಯುತ್ಪಾತವು; ವನ ವೃಕ್ಷ ಉದ್ಯಾನಗಳನ್ನು; ಪುರ ಪಟ್ಟಣಗಳನ್ನು, ತನ್ನ ತಪ್ತಾಗ್ನಿಯಿಂದ ದಹಿಸಿ, ಜೀವರಾಶಿಗಳಿಗೆಲ್ಲ ಮೃತ್ಯುದೇವತೆಯ ತುತ್ತಾಗುವಂತೆ ಮಾಡುತ್ತದೆ.

**ಭೂಕಂಪ :-** ಭೂಮಿಯು ನಡುಗಿ ಇಬ್ಭಾಗವಾಗಿ ಮನೆ, ಆಶ್ರಮ, ಶಿಬಿರ, ವ್ರಜ, ಪುರ ಪಟ್ಟಣಗಳು ಭೂಮಿಯಲ್ಲಿ ಮುಳುಗಿ; ಎಲ್ಲ ಜೀವರುಗಳು ಕಾಲದ ತುತ್ತಾಗುವರು.

**ಝಂಝಾವಾತ :-** ಅತಿ ಬಿರುಗಾಳಿಯಾಗಿ ಮರ, ಗಿಡ, ಬಳ್ಳಿ, ಮನೆ, ಮಠ, ಮಂದಿರ, ಪುರ, ಪಟ್ಟಣಗಳಲ್ಲಿರುವ ಮಾನವರ ಸುಖ ಸೌಕರ್ಯ ವಸ್ತುಗಳೆಲ್ಲ ನಷ್ಟ ಭ್ರಷ್ಟವಾಗಿ ಪೀಡಿತರಾಗುತ್ತಾರೆ.

**ರೋಗ :-** ಕಾಲರಾ, ಪ್ಲೇಗು, ಶ್ಲೇಷ್ಮ, (ಇನ್‌ಫ್ಲ್ಯೂಯಂಜಾ) ಆದಿ ಜ್ವರಗಳು; ಕ್ಷಯ, ಮಹಾಮೇಹ, ಉಪದಂಶ, ಪ್ರಮೇಹ ಮೊದಲಾದ ಸಾಂಕ್ರಾಮಿಕ ರೋಗಗಳಿಂದ ಮಾನವ ಸಮಾಜವು ಪೀಡಿತವಾಗುತ್ತದೆ.

**ಮಹಾಯುದ್ಧ :-** ಪರಸ್ಪರ ರಾಷ್ಟ್ರಗಳಲ್ಲಿ ದ್ವೇಷಾಸೂಯ ಮೂಲಕ ಸಂಘರ್ಷ ಹುಟ್ಟಿ, ರಕ್ತಪಾತವಾಗಿ ಮಾನವ ಕುಲವು ಮಡಿಯುತ್ತದೆ.

ಕ್ಷಾಮ :- ದುರ್ಭಿಕ್ಷ ಮೂಲಕ ಅನ್ನಾಭಾವ, ವಸ್ತ್ರಾಭಾವ, ಜಲಾಭಾವವಾಗಿ ಮಾನವ ಸಮಾಜವು ಮಡಿಯುತ್ತದೆ.

ವಿಜ್ಞಾನವಾದಿ ಮಾನವನು ತನಗೆ ಬೇಕಾಗಿರುವ ಸುಖ ಸೌಕರ್ಯದ ಸಾಮುಗ್ರಿಗಳನ್ನು ಅನಂತ ವಿಧವಾಗಿ ಕಲ್ಪಿಸಿ: ಅವುಗಳಿಗೆ ಬರುವ ಅನಿಷ್ಟ ದುರಿತಗಳ ಪರಿಹಾರಕ್ಕಾಗಿ, ಎಷ್ಟು ವಿಧ ಉಪಾಯ ಯೋಜನೆಗಳು ಕಲ್ಪಿಸಿದ್ದರೂ; ಇವನು ತನ್ನ ಸುಖ ಸಮೃದ್ಧಿಯಲ್ಲಿ ಪೂರ್ಣತೆಯನ್ನು ಹೊಂದಲಾರನು. ಇವನು ಕಿಂಚಿಜ್ಞನಾದರಿಂದ ಇವನ ಎಲ್ಲ ಕಾರ್ಯಗಳು ಸೀಮಿತ ಸ್ವರೂಪದಲ್ಲಿ ಇರುವದು ಸ್ವಾಭಾವಿಕವಾಗಿದೆ. ಮಾತ್ರ ಪ್ರಕೃತಿಯು ಅನಂತ, ಅಪಾರ, ಅಗಣಿತ ಮಹಿಮಾಶಾಲಿಯಾದರಿಂದ; ಮಾನವನ ಬುದ್ಧಿಶಕ್ತಿಗೆ ಅದು ಗಣ್ಯವಾಗಲು ಸಾಧ್ಯವಿಲ್ಲ.

ರಾಷ್ಟ್ರ ಸಂಪತ್ತಿಯಾದ ಪ್ರಜರಿಗೆ ಯಾವದೇ ರೋಗ ರುಜಾದಿಗಳು ಸಂಭವಿಸಿ, ಅವರ ಖಾದ್ಯಗಳೆನಿಸಿದ ಪುಷ್ಪ, ಫಲ. ಮೂಲ ಹಾಗು ನಾನಾ ವಿಧ ಧಾನ್ಯ, ತೃಣಾದಿಗಳಿಗೆ ಕ್ರಿಮಿ ಕೀಟಕ ರೋಗಗಳ ಉತ್ಪತ್ತಿಯಾಗಲು; ಅದರ ಪರಿಹಾರಕ ಔಷಧೋಪಚಾರಗಳನ್ನು ಸಂಶೋಧನೆಗೊಳಿಸಿ, ಕ್ರಮ ಕೈಕೊಳ್ಳುವಷ್ಟರಲ್ಲಿಯೇ; ಮತ್ತೊಂದು ಹೊಸದಾಗಿ ಕ್ರಿಮಿ ಕೀಟಕ ರೋಗಗಳು ಉತ್ಪತ್ತಿಯಾಗುತ್ತಿವೆ.

ಈ ವಿಜ್ಞಾನಿಯು ಒಂದು ಸಲ ಗೋಚರವಾದ ಅನಿಷ್ಟಕ್ಕೆ ಪರಿಹಾರಕ ಉಪಾಯ ಯೋಜನೆಗಳು ಕಲ್ಪಿಸಿ ಮತ್ತೊಮ್ಮೆ ಅದರ ಪ್ರಭಾವವು ಆಗಬಾರದೆಂದು ದಕ್ಷತೆಗೊಳ್ಳುತಿದ್ದರೂ, ಆ ಪ್ರಕೃತಿಯು ಇವನ ಪೀಡೆಗಾಗಿ ಎಷ್ಟು ವಿಧ ವಿಷಮ ಸ್ವಭಾವದಿಂದ ಕೂಡಿರುವದೆಂಬ ಅದರ ಮಹತಿಯು ಕಿಂಚಿಜ್ಞ ಮಾನವನಿಗೆ ತಿಳಿಯುವದು ಹೇಗೆ ಸಾಧ್ಯ ?

ಒಂದು ಯೋಜನೆ ಸಂಶೋಧನ ಗೊಳಿಸುವಲ್ಲಿ ಮತ್ತೊಂದು ವಿಧವಾಗಿ ಪರಿವರ್ತನೆ ಹೊಂದುವ ಈ ಪ್ರಕೃತಿಯ ಧರ್ಮಕ್ಕೆ ತಡೆಗಟ್ಟುವದು ಮಾನವನಿಗೆ ಸರ್ವಥಾ ಸಾಧ್ಯವಾದುದಿಲ್ಲ.

ಮಾನವನು ತನ್ನ ನೈಸರ್ಗಿಕ ಧರ್ಮಗಳಾದ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವುಗಳ ಉಲ್ಲಂಘನೆ ಮಾಡಿ; ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ದುಷ್ಕೃತಿಗಳಲ್ಲಿ ಪ್ರವೃತ್ತನಾದರೆ, ಇಂತಹ ಪಾಪೀ ಮಾನವ ಸಮಾಜದ ಭೂತ, ಪ್ರಾಣ, ಭಾವ ದೂಷಿತ ಕಣಗಳು; ಪ್ರಕೃತಿಯ ವ್ಯಾಪಕ ಭಾವ, ಪ್ರಾಣ, ಭೂತಗಳಲ್ಲಿ ಸೇರುತ್ತವೆ. ಆ ಪ್ರಕೃತಿಯು ಈ ಮಾನವರ ಪಾಪಕ್ಷಾಲನಾರ್ಥವಾಗಿ, ಇವರ ಭಾವ ಪರಿಶುದ್ಧತೆಗಾಗಿ ಮಳೆ, ಚಳಿ, ಬೇಸಿಗೆ ಕಾಲಗಳು; ಪೃಥ್ವಿ, ಅಪ, ತೇಜ, ವಾಯು, ಆಕಾಶ ಪಂಚ-ಮಹಾಭೂತಗಳು, ಸೂರ್ಯ ಚಂದ್ರಾದಿ ಗ್ರಹಗಳು ಇವೆಲ್ಲ ತಮ್ಮ ಸಂರಕ್ಷ-ಣೆಯ ಧರ್ಮವನ್ನು ಬಿಟ್ಟು, ಮಾನವ ಕುಲದ ಸಂಹಾರ ಕ್ರಮದಲ್ಲಿ ವರ್ತಿ-ಸುತ್ತನೆ.

"ಪ್ರಕೃತಿಕೋಪಃ ಸರ್ವಕೋಪೇಭ್ಯೋ ಗರಿಯಾನ್"

ಚಾಣಕ್ಯಸೂತ್ರ (ಪ್ರಥಮಾಧ್ಯಾಯ)

ಗ್ರಹಭಯ, ರಾಜಭಯ, ಚೋರಭಯ, ರೋಗಭಯ ಮೊದಲಾದ ಭಯಗಳಿಗಿಂತಲೂ; ಪ್ರಕೃತಿ ಕೋಪದ ಭಯವೇ ಸರ್ವಶ್ರೇಷ್ಠವಾದುದೆಂದು ಹೇಳಲಾಗಿದೆ. ಸೂಕ್ಷ್ಮ ಪ್ರಾಣಮಯ ಶರೀರಿಗಳಾದ ಶನಿ, ರಾಹು, ಕೇತು, ಮಂಗಳ, ಭೂತ, ಪ್ರೇತ, ಪಿಶಾಚ್ಚ ಇತ್ಯಾದಿ ಗ್ರಹಗಳ ಭಯನಿವಾರಣೆಗಾಗಿ ಜಪ, ಹೋಮ, ತರ್ಪಣ, ಅನ್ನಶಾಂತಿ ಮೊದಲಾದ ಕ್ರಮಗಳುಂಟು. ರಾಜನು ಕೋಪಗೊಂಡರೆ ಅವನನ್ನು ಅನನ್ಯ ಭಾವದಲ್ಲಿ ಶರಣು ಹೋಗಲು; ಅವನು ಪ್ರಶಾಂತನಾಗಬಹುದು. ಚೋರಭಯವು ರಾಜದಂಡದ ಶಾಸನ ಮೂಲಕ ಕಡಿಮೆಯಾಗುವದು. ಮತ್ತೆ ರೋಗಭಯವು, ಔಷಧೋಪ-ಚಾರಗಳಿಂದ ಕಡಿಮೆಯಾಗಬಹುದು. ಆದರೆ ಪ್ರಕೃತಿಯಲ್ಲಿ ವಿಕೃತಿಯಾಗಿ ವಿಕೋಪಗೊಂಡರೆ, ಅದರ ಭಯ ನಿವಾರಣೆಗಾಗಿ, ಅದರ ಪ್ರಸನ್ನತೆಗಾಗಿ, ಮಾನವನ ಯಾವ ಉಪಾಯ ಯೋಜನೆಗಳು ನಡೆಯದೆ, ಪ್ರಕೃತಿಯ ವಿಕೋಪದಿಂದಾಗುವ ಕಷ್ಟನಷ್ಟಗಳು ಸಹಿಸ ಬೇಕಾಗುವದೆ ಹೊರತು

ಬೇರೊಂದಿಲ್ಲವಾದರಿಂದ, ಸರ್ವಕೋಪಗಳಿಗಿಂತಲೂ ಪ್ರಕೃತಿ ಕೋಪವೇ ಸರ್ವ ಶ್ರೇಷ್ಠವಾದುದೆಂದು ನಿರ್ಧರಿಸಲಾಗಿದೆ.

ರಾಷ್ಟ್ರದ ಮಾನವರಲ್ಲಿ ಪುಣ್ಯಕರ್ಮದ ಸುಕೃತವು ಚನ್ನಾಗಿರಲು; ಪಂಚಮಹಾಭೂತಗಳು ನಿಯಮಿತ ಸ್ವರೂಪದಾಗಿ ವರ್ತಿಸಿ ಸಂರಕ್ಷಿಸುತ್ತವೆ. **ಪಂಚಮಹಾ ಭೂತಗಳ ನಿಸರ್ಗಕ್ಕೂ ಮತ್ತು ಮಾನವನ ನಿಸರ್ಗಕ್ಕೂ ಅತ್ಯಂತ, ಅನ್ಯೋನ್ಯ ನಿಕಟ ಸಂಬಂಧ ವಿರುತ್ತದೆ.**

ಪ್ರಜಾಪ್ರಭುತ್ವ ಮೂಲಕವೇ ಪ್ರಜಾರಾಜ್ಯವೆಂದು ನಾಮಾಭಿಧಾನ ವಾಗಿದೆ. ಸಾಂಕ್ರಾಮಿಕ ರೋಗ ರುಜಾದಿಗಳ ಮೂಲಕ ಬರುವ ದುರ್ಮರಣಗಳಿಂದಲೂ, ಪರ ವ್ಯಕ್ತಿ ಪರರಾಷ್ಟ್ರಗಳಿಂದಾಗುವ ಪೀಡೆಯಿಂದಲೂ, ದುರ್ಭಿಕ್ಷದಿಂದಲೂ, ಅನ್ನಾಭಾವ, ವಸ್ತ್ರಾಭಾವ, ಜಲಾಭಾವ ಗಳಿಂದಾಗುವ ಅನಿಷ್ಟಗಳನ್ನು ಪರಿಹಾರಗೊಳಿಸಿ, ಸಕಲ ಪ್ರಜರಿಗೆ; ಅನ್ನ, ವಸ್ತ್ರ, ವಿದ್ಯಾ, ಬುದ್ಧಿಗಳಿಂದ ಸಮೃದ್ಧರನ್ನಾಗಿ ಮಾಡಿ ರಾಷ್ಟ್ರದ ಸರ್ವತೋಪರಿ ಉನ್ನತಿಯಾಗಲೆಂಬ, ಸುಖ-ಶಾಂತಿ ಸ್ಥಾಪನೆಯ ಉದ್ದೇಶಕ್ಕಾಗಿ ಪ್ರಜಾಪ್ರಭುತ್ವದ ಶಾಸಕ ಸಂಘ ಸ್ಥಾಪನೆಯಾಗಿರುತ್ತದೆ. ಇದರ ಸುಖ-ದುಃಖಕ್ಕೆ ಪ್ರಜರೇ ಮೂಲ ಕಾರಣರಾಗಿದ್ದಾರೆ. ಬಹು ಸಂಖ್ಯಾಂಕ ಪ್ರಜರ ಮನೋಬಲದ ಸಾಮೂಹಿಕ ಶಕ್ತಿಯೇ ಪ್ರಜಾಪ್ರಭುತ್ವವೆನಿಸಿದೆ.

ಜೋಳದ ಒಂದೊಂದು ಕಾಳು ಒಟ್ಟುಗೂಡಿಸಿ ಒಂದು ರಾಶಿಯಾಗಿ ತೋರುವಂತೆ ರಾಷ್ಟ್ರದಲ್ಲಿಯ ಚಿಕ್ಕ-ಪುಟ್ಟ ಎಲ್ಲ ವ್ಯಕ್ತಿಗಳು ಸಮಾನ ಅಧಿಕಾರ ಉಳ್ಳವರಾಗಿ ಬಹು ಮತದಿಂದ ಆರಿಸಲ್ಪಡುವ, ಸಾಮೂಹಿಕ ಶಕ್ತಿಯನ್ನು ಒಟ್ಟುಗೂಡಿಸಿರುವದೇ ಪ್ರಜಾಪ್ರಭುತ್ವದ ಶಾಸನ ಪದ್ಧತಿಯಾಗಿದೆ.

ಪ್ರಜಾಪ್ರಭುತ್ವದಲ್ಲಿ, ನ್ಯಾಯ ಮತ್ತು ಸತ್ಯವು ಮತದಾನ ಪದ್ಧತಿಯಲ್ಲಿ ಸೇರಿ ಪ್ರಜರಿಂದ ಬಹುಮತವಾಗಿ ಯಾವುದು ಒಪ್ಪಿಗೆಯಾಗಿರುವದೋ ಅದೇ ನಿಜವಾದ ನ್ಯಾಯ, ನಿಜವಾದ ಸತ್ಯವೆನಿಸುವದು.

ಪ್ರಜಾರಾಜ್ಯದ ಮಾನವನು ಹದಿನೆಂಟು ವರ್ಷ ತುಂಬಿದಾಗಲೇ ಪೂರ್ಣ ಪ್ರಭುತ್ವ ಪಡೆದವನಾಗುತ್ತಾನೆ. ಪ್ರಜಾಪ್ರಭುತ್ವ ಶಾಸನಕ್ಕೆ ವಯೋಮಾನವ ಅತ್ಯಾವಶ್ಯಕತೆ ಇದೆ. ಅವನಲ್ಲಿ ಯಾವ ಸದ್ಗುಣಗಳು ಇರಲಿ ಅಥವಾ ಇಲ್ಲದಿರಲಿ, ತನ್ನ ಮತ್ತು ತನ್ನ ಬಂಧು ಬಾಂಧವರ, ತನ್ನ ರಾಜ್ಯದ, ತನ್ನ ಸಂಘರಾಷ್ಟ್ರದ ಸುಖ ದುಃಖವನ್ನು ಅರಿಯುವ ಪೂರ್ಣ ಪುರುಷನಾದನೆಂದು ಪ್ರಜಾಪ್ರಭುತ್ವ ಶಾಸಕ ಸಂಘವು ನಂಬುತ್ತದೆ.

ಅವನು ದುಷ್ಟನೋ, ಶಿಷ್ಟನೋ ? ಅವನು ಅಜ್ಞಾನಿಯೋ, ಜ್ಞಾನಿಯೋ ? ಅವನು ನಿಂದ್ಯನೋ, ಒಂದ್ಯನೋ ? ಅವನು ಪಾಮರನೋ ? ಪಂಡಿತನೋ ? ಅವನು ದುಃಶೀಲನೋ, ಸುಶೀಲನೋ ? ಅವನು ವ್ಯಸನಿಯೋ, ನಿರ್ವ್ಯಸನಿಯೋ ? ಅವನು ಭೋಗಿಯೋ, ತ್ಯಾಗಿಯೋ ? ಅವನು ನಿರ್ದಯನೋ, ದಯಾಮಯನೋ ? ಅವನು ಮಿಥ್ಯಾವಾದಿಯೋ, ಸತ್ಯವಾದಿಯೋ? ಅವನು ಹಿಂಸಕನೋ, ಅಹಿಂಸಕನೋ ? ಅವನು ಚೋರನೋ, ಅಸ್ತೇಯನೋ? ಅವನು ವ್ಯಭಿಚಾರಿಯೋ,? ಬ್ರಹ್ಮಚಾರಿಯೋ? ಯಾವುದೆಂಬುದು ಸತ್ಯಾಸತ್ಯದ ವಿಚಾರವಾಗದೆ, ಕೇವಲ ಹದಿನೆಂಟು ವರ್ಷದ ಪೂರ್ತಿಗೆ, ಪ್ರಜಾಪ್ರಭುತ್ವ ಶಾಸಕ ಸಂಘದ ಹಕ್ಕದಾರ ಜವಾಬ್ದಾರ, ಜಿಮ್ಮೇದಾರ ವ್ಯಕ್ತಿಯಾದನೆಂದು ಒಪ್ಪುತ್ತದೆ.

ವನ ವೃಕ್ಷಗಳು ಕ್ರಮೇಣ ಬೀಜ, ಅಂಕುರ, ಪಲ್ಲವ, ಎಲೆ, ಶಾಖೆ, ಉಪಶಾಖೆ, ಮೊಗ್ಗೆ, ಹೂ, ಮಿಡಿ, ಕಾಯಿ, ಹಣ್ಣುಗಳ ರೂಪವಾಗಿ ಸ್ವಾಭಾವಿಕ ಪ್ರಕೃತಿ ನಿಯಮಾನುಸಾರ ವಿಕಾಸವಾಗುವಂತೆ, ಮಾನವನ ಜನನ,

ಶೈಶವ, ಬಾಲ್ಯ, ಕೌಮಾರ್ಯ, ತಾರುಣ್ಯ, ವೃದ್ಧಾಪ್ಯ ಹೀಗೆ ಶರೀರಕಣಗಳ-ಲ್ಲಿಯ ಪರಿವರ್ತನೆ ಧರ್ಮವು ಸ್ವಾಭಾವಿಕವಾಗಿರುವದು. ಆದರೆ ಜ್ಞಾನದ ಉತ್ತರೋತ್ತರ ಅಭಿವೃದ್ಧಿಯಾಗ ಬೇಕಾದರೆ, ಶಿಕ್ಷಣ ಮತ್ತು ಸಂಸ್ಕಾರದ ಆವಶ್ಯಕತೆ ಇದೆ. ವನಸ್ಪತಿಗಳ ವಿಕಾಸಕ್ಕೆ ಕೇವಲ ವಯೋ (ಕಾಲ) ಮಾನವು ಅವಸ್ಯಕ ವಾಗಿರುವಂತೆ ಮಾನವನ ವಿಕಾಸಕ್ಕೆ ವಯೋ-ಮಾನದ ಪ್ರಮಾಣವಷ್ಟೇ ಸಾಕಾಗುವದಿಲ್ಲ. ಅದರೊಡನೆ ಜ್ಞಾನಾ-ಭಿವೃದ್ಧಿಯು ಶಿಕ್ಷಣ ಮೂಲಕ ವಿಕಾಸ ಗೊಳಿಸುವದು ಪ್ರಾಮುಖ್ಯ-ವಾಗಿದೆ. ವಯೋಮಾನದ ವಿಚಾರವಷ್ಟೇ ಅವಶ್ಯಕವೆನಿಸಿದಲ್ಲಿ ವನಸ್ಪತಿಗಳೋಪಾದಿಯಲ್ಲಿ ಮಾನವನು ಜಡಜೀವಿಯಲ್ಲ.

ಒಂದು ಪಕ್ಷ ಶಿಕ್ಷಣ,ಕ್ರಮವು ರಾಷ್ಟ್ರದ ಪ್ರಜರಿಗೆ ಇದ್ದೇ ಇದೆ. ಸಾಕ್ಷರತೆಯ ಪ್ರಸಾರವು ಮುಖ್ಯವಾಗಿ ವಿದ್ವತ್ ಸಂಘದ ಒತ್ತಾಯ ಶಿಕ್ಷಣ ಮೂಲಕ ಕೊಡುವ ಪಾಠಶಾಲೆಗಳು ಅನೇಕವಾಗಿದ್ದು; ವಿದ್ಯಾಲಯ, ಮಹಾವಿದ್ಯಾ-ಲಯ ಮತ್ತು ವಿಶ್ವವಿದ್ಯಾಲಯಗಳು ಗಿರಿ-ಕಂದರಗಳಲ್ಲಿ, ಪುರ-ಪಟ್ಟಣಗಳಲ್ಲಿ, ಹಳ್ಳಿ-ಪಳ್ಳಿಗಳಲ್ಲೆಲ್ಲಿಯೂ ಉಪಲಬ್ಧವಾಗಿವೆ. ಪ್ರಜರ ಜ್ಞಾನಾಭಿವೃದ್ಧಿಗೆ ಶಿಕ್ಷಣ ವಿಲ್ಲೆಂಬುದು ಹೇಗೆ? ಎಂಬ ಪ್ರಶ್ನೆಯು ತೋರಿಬಂದಲ್ಲಿ?

ಆಧುನಿಕ ಭೌತಿಕ ಶಿಕ್ಷಣ ಕ್ರಮವು ಕೇವಲ ಅರ್ಥೋಪಾರ್ಜನೆಯ ಮೂಲಕ ಜೀವನ ಚರಿತಾರ್ಥವು ಸಾಗಿಸುವ ಉದ್ದೇಶಕ್ಕಾಗಿ ಉಪಕ್ರಮಿಸಿ-ರುವದಾಗಿದೆ, ಹೊರತು ಬೇರೊಂದಿಲ್ಲ. ಐಹಿಕ ಜೀವನ ಚರಿತಾರ್ಥ ಸಾಗಿ-ಸುವ ಶಿಕ್ಷಣ ಮೂಲಕ ಪ್ರಜಾಪ್ರಭುತ್ವದ ವಿಚಾರಣೆಗೆ ಮತದಾನ ಸಲ್ಲಿಸುವ ಪಾತ್ರತೆಯು ಅದು ಹೇಗೆ ಪ್ರಾಪ್ತವಾಗುತ್ತದೆ. ?

ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಮಾನವನ ಸ್ವಾಭಾವಿಕ ಧರ್ಮಗಳಾದ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇವುಗಳ ಶಿಕ್ಷಣ ಕ್ರಮವು ಬೇಕೇ, ಬೇಕು. ಈ ನಿಯಮಗಳ ಪಾಲನೆಯುಳ್ಳವನೇ ಮಾನವ. ಇವು-

ಗಳ ಶಿಕ್ಷಣವು ಧರ್ಮ ಪೀಠಗಳ ಮೂಲಕ ರಾಷ್ಟ್ರದ ಎಲ್ಲ ಪ್ರಜರಿಗೆ ದೊರೆಯದಿದ್ದಲ್ಲಿ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಈ ಅನೈಸರ್ಗಿಕ-ಪ್ರವೃತ್ತಿಯುಳ್ಳವನು ಮಾನವನೆನಿಸಲಾರನು. ಇಂತಹ ಅಮಾನವತೆಯುಳ್ಳ ದುರಾಚಾರ ಜನಗಳಿಗೆ ಪ್ರಜರೆಂದು ಒಪ್ಪಿ; ಅವರಿಂದ ಮತದಾನ ಪಡೆದರೆ ಪರಿಶುದ್ಧ ಪ್ರಜಾಪ್ರಭುತ್ವ ರಾಷ್ಟ್ರವಾಗಲಾರದು.

ಮತದಾನಕ್ಕೆ ವಯೋಮಾನದೊಡನೆ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ನಿಯಮಗಳನ್ನು ಪರಿಪಾಲಿಸತಕ್ಕ ಪೂರ್ಣ ಮಾನವನಿರುವನೋ ಇಲ್ಲವೋ ಎಂಬುದು ವಿಚಾರಿಸುವದು ಅವಶ್ಯಕವಾಗಿದೆ. ಮಾನವತಾ ಸಂಪನ್ನ ಗುಣಗಳ ಅಭಾವವಿದ್ದಲ್ಲಿ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಮತದಾನ ಕೊಡುವ ಅಧಿಕಾರವಿರುವದಿಲ್ಲ. ಪಾಪಾತ್ಮರ ಮತದಾನವು ಸತ್ಪಾತ್ರಕ್ಕೆ ಸಲ್ಲಿ ಶಾಂತಿ ಸ್ಥಾಪನೆಗೆ ಸಹಾಯಕವಾಗಲಾರದು.

ನಮ್ಮೀ ಸೃಷ್ಟಿಯ ಸ್ವಭಾವ ಗುಣ ಧರ್ಮದ ವಿಚಾರ ಮಾಡಲು, ಸೃಷ್ಟಿಯು ತನ್ನುದರದಲ್ಲಿ ಉತ್ತಮ ಪದಾರ್ಥಗಳನ್ನು ಅಲ್ಪ ಪ್ರಮಾಣವಾಗಿ ದೋಷ ದುರ್ಗುಣಗಳಿಂದ ಕೇಡನ್ನುಂಟು ಮಾಡುವ ಪದಾರ್ಥಗಳನ್ನು ಬಹು ಪ್ರಮಾಣವಾಗಿ ಇರಿಸಿರುವದು ಪ್ರತ್ಯಕ್ಷವಾಗಿದೆ. ಮಾವು, ಬಾಳೆ, ದ್ರಾಕ್ಷಿ, ಸೇಬು, ಸಂತ್ರೆ, ಮೋಸಂಬಿ, ದಾಳಿಂಬೆ ಮೊದಲಾದ ಸವಿ ಹಣ್ಣಿನ ಗಿಡಗಳು ಕಡಿಮೆಯಾಗಿವೆ. ಬೇವು, ಬಾರಿ, ಜಾಲಿ, ಈಚಲ ಮೊದಲಾದ ಒಗರು, ವಿಷ, ಹುಳಿ, ಮತ್ತು ಫಲಹೀನ ಗಿಡಗಳು ಹೆಚ್ಚಾಗಿ ತೋರುತ್ತಿವೆ.

ಕರಿ, ಬಿಳಿ, ಕೆಂಪು, ನೀಲಿ ಬಣ್ಣದ ಕಲ್ಲುಗಳು ಬಹು ಪ್ರಮಾಣವಾಗಿವೆ. ಹವಳ, ಮುತ್ತು, ರತ್ನ, ಸ್ಫಟಿಕ, ವಜ್ರ ಇವು ಅಲ್ಪ ಪ್ರಮಾಣವಾಗಿವೆ.

ಕಬ್ಬಿಣ, ಹಿತ್ತಾಳೆ, ತಾಮ್ರ ಬಹು ಪ್ರಮಾಣವಾಗಿವೆ. ಆದರೆ ಬೆಳ್ಳಿ, ಬಂಗಾರ ಅಲ್ಪ ಪ್ರಮಾಣವಾಗಿವೆ.

ಆದರಂತೆಯೇ ಹಿಂಸಾ, ಅಸತ್ಯ ಸ್ತೇಯ, ವ್ಯಭಿಚಾರ ಈ ದೋಷ ದುರ್ಗುಣಪೂರಿತ ಮಾನವ ಸಮಾಜವು ಬಹುಪ್ರಮಾಣವಾಗಿದೆ.

ಅಹಿಂಸಾ, ಸತ್ಯ, ಅಸ್ತೇಯ ಬ್ರಹ್ಮಚರ್ಯ ಈ ಸದ್ಗುಣ ಪೂರಿತಮಾನವಸಮಾಜವು ಅತ್ಯಲ್ಪವಾಗಿರುವದು ಇದು ಸ್ವಾಭಾವಿಕ.

ಉತ್ತಮ ವಸ್ತುಗಳು ಅಲ್ಪ ಪ್ರಮಾಣವಾಗಿವೆಯೆಂದು ಅವುಗಳ ಯೋಗ್ಯತೆಯು ಬೆಲೆಯಲ್ಲಿ ಕಡಿಮೆಯಾಗಿರುವದಿಲ್ಲ.

ಉದಾ :– ಹತ್ತು ಸಾವಿರ ಗ್ರಾಮ್ ಲೋಹದ ಬೆಲೆಯು ಕೇವಲ ಒಂದು ಗ್ರಾಮ್ ಸುವರ್ಣಕ್ಕೆ ಸಮವಾಗಿದೆ. ಲೋಹಕ್ಕೂ ಮತ್ತು ಸುವರ್ಣಕ್ಕೂ ಬೆಲೆಯಲ್ಲಿಷ್ಟು ಮಹದಂತರವಿರುವದು.

ಲೋಹವು ಪ್ರತಿನಿತ್ಯದ ವ್ಯವಹಾರಕ್ಕೆ ಅತ್ಯುಪಯುಕ್ತವಾದರೂ ಆದರ ಜೀವಿತದಲ್ಲಿ ಶಾಶ್ವತಿಯ ಅಭಾವವಾಗಿದೆ. ಚಿರಕಾಲ ಬಾಳುವ ಗುಣ ಧರ್ಮವು ಇಲ್ಲದಾಗಿ ಶೀಘ್ರ ನಾಶ ಹೊಂದುವ ಪ್ರಯುಕ್ತ ಅದು ಅಲ್ಪ ಬೆಲೆಯುಳ್ಳದಾಗಿರುತ್ತದೆ.

ಸುವರ್ಣವು ನಿತ್ಯ ಜೀವನ ಚರಿತಾರ್ಥ ವ್ಯವಹಾರಕ್ಕೆ ಅನಾವಶ್ಯಕವಾದರೂ ಸಾವಿರಾರು ವರ್ಷ ದೀರ್ಘಕಾಲ ಕಳೆಯುತ್ತ ಹೋದಾಗಲೇ ಆದರ ಶಾಶ್ವತಿಯು ಹೆಚ್ಚುತ್ತ ಹೋಗುವ ಈ ಗುಣಧರ್ಮ ಮೂಲಕ ಅತ್ಯಲ್ಪ ಒಂದು ಗ್ರಾಮ್ ಸುವರ್ಣವು ಹತ್ತು ಸಾವಿರ ಗ್ರಾಮ್ ಲೋಹಧಾತುವಿಗೆ ಸಮನಾಗಿರುವಂತೆ; ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಪರಿಪಾಲಿಸುವ ಮಾನವತಾ ಸಂಪನ್ನ ಸತ್ವ ಪ್ರಧಾನ ಒಬ್ಬ ಮನುಷ್ಯನ ಮತದಾನ ಸಮವಾಗಿ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಪ್ರವೃತ್ತ ದುರ್ಜೀವಿ ಸತ್ವಹೀನ ಮಾನವರ ಹತ್ತು ಸಾವಿರ ಮತದಾನಗಳು ಪ್ರಜಾಪ್ರಭುತ್ವ ರಾಷ್ಟ್ರದ ಶಾಂತಿ ಸ್ಥಾಪನೆಗೆ ಸಹಾಯಕವಾಗಲಾರವು.

ದುಷ್ಟ ಪ್ರವೃತ್ತಿಯ ಜನಗಳು ಅತ್ಯಂತ ಸತ್ವ ಪ್ರಧಾನ ವ್ಯಕ್ತಿಗಳನ್ನು ಹಿಂಬಾಲಿಸುವದಿಲ್ಲ. ಯಾವದೇ ಒಂದು ವಸ್ತುವಿನ ದಾನಕ್ಕೆ ಮೊದಲು ದಾನಕ್ಕಾಗಿ ಬಂದಿರುವ ವ್ಯಕ್ತಿಯ ವಿಷಯವಾಗಿ ಪ್ರೇಮಾದರ ಭಾವವು ಮೊದಲಿಗಿದ್ದು ಆಮೇಲೆ ದಾನಕರ್ಮವಿರುವಂತೆ. ಮತದಾನಕ್ಕೂ ಪ್ರೇಮಾದರ ಭಾವವು ಬೇಕೇ ಬೇಕು.

"ಸಮಾನಶೀಲ ವ್ಯಸನೇಷು ಸಖ್ಯ:"

ವೆಂಬಂತೆ ಸಖ್ಯವು ಮೈತ್ರಿಯು ಕೂಡಬೇಕಾದರೆ ಅಹಿಂಸಾ, ಸತ್ಯಾದಿ ಸಂಪನ್ನ ಸಜಾತಿಯ ಸದ್ಗುಣಗಳು ಬೇಕು. ಅಥವಾ ಹಿಂಸಾ, ಚೌರ್ಯ, ಅಸತ್ಯಾದಿ ದೋಷ ದುರ್ಗುಣಗಳಲ್ಲಿ ಸಮಾನತೆಯಾದರೂ ಬೇಕು. ಸುಶೀಲರು ಸುಶೀಲ ಜನರಿಗೆ, ದುಃಶೀಲರು ದುಷ್ಟ ದುರಾಚಾರಿಗಳಿಗೆ ಪ್ರೇಮಿಸುವದು ಇದು ಸ್ವಾಭಾವಿಕ ವಾಗಿರುವಂತೆ ಮಾನವತಾ ಸಂಪನ್ನ ಪವಿತ್ರಾತ್ಮರಿಗೆ; ದುಷ್ಟ ಪ್ರವೃತ್ತಿಯ ಅಮಾನುಷ ದುರಾತ್ಮರ ಮತದಾನವಾಗಲಾರವು.

ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಪೂರ್ಣ ಶಾಂತಿ ಸ್ಥಾಪನೆಗೆ ಮತದಾನ ಪದ್ಧತಿಯು ಪವಿತ್ರವಾಗಿರಬೇಕು. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ಮಾನವತಾ ಸಂಪನ್ನ ಸುಪ್ರಜರಿಗೆ ಮತದಾನದ ಅಧಿಕಾರವು ಇರಬೇಕಾಗಿದೆ. ಇಂತಹ ಮತದಾನದಲ್ಲಿ ಯಾವ ವಿಷಯಗಳು ಬಹು ಮತವಾಗಿ ನಿರ್ಣಯಿಸಲ್ಪಟ್ಟಿರುವವೋ, ಅವೇ ನಿಜವಾದ ಸತ್ಯವಾಗಿರುವವು.

ರಾಷ್ಟ್ರದ ಪ್ರಜರು ಮತದಾನವು ಯಾರಿಗೆ ಸಲ್ಲಿಸಬೇಕೆಂಬ ವಿಚಾರವು ಮಾಡುವದು ಅವಶ್ಯಕವಾಗಿದೆ. ಮತ ದಾನ ವಾಗಬೇಕೇ ಹೊರತು ಮತಯಾಚನೆಯಾಗಬಾರದು. ಪದ ಲೋಲುಪ ಜೀವಿಗಳು ತಮ್ಮ ಕಾಯಭಾವದಲ್ಲಿ ಜಡ ಮತಿಯರಾಗಿ ಯಾವದಾದರೊಂದು ಪದವಿಯನ್ನು ಪಡೆಯು-

ವದು; ಇದು ಮಾನವ ಜೀವನದ ಸಾಫಲ್ಯತೆಯೆಂದು ಭಾವಿಸುತ್ತಾರೆ. ರಾಷ್ಟ್ರದ ಅಭಿವೃದ್ಧಿಗೆ ಸೇವೆ ಸಲ್ಲಿಸುವ ಪಾತ್ರತೆಯು ತನಗೆ ಇದೆಯೋ ಇಲ್ಲವೋ ? ಎಂಬ ಯಾವ ವಿಚಾರದ ಕಡೆಗೆ ಗಮನಿಸುವದಿಲ್ಲ. ಮನೆ ಮನೆಗೆ ಸ್ವಯಂಚರಿಸಿ, ಯನಗೆ ಮತ ಕೊಡಿರಿ ಯನಗೆ ಮತ ನೀಡಿರೆಂದು, ಯಾಚಿಸುವರು. ಇದಕ್ಕೂ ಸಾಧ್ಯವಿರದ ಪಕ್ಷದಲ್ಲಿ ಧನ, ಧಾನ್ಯ, ಬೆಳ್ಳಿ, ಬಂಗಾರ ಮೊದಲಾದ ಯಾವದೇ ವಸ್ತುಗಳು ಕೊಟ್ಟು ಅವರ ಮನ ಸೆಳೆಯುತ್ತಾರೆ. ಮತ್ತೆ ಪ್ರಜರ ಮನೋಭಾವನೆಗಳು ತಮಗೆ ಅಭಿಮುಖವಾಗುವಂತೆ; ಲೋಕ ಪ್ರತಿಷ್ಠಿತ ವರಿಷ್ಠ ಜನಗಳಿಂದ ಹೇಳಿಸಿ ತನಗೇ ಸರ್ವ ಮತಗಳು ಪ್ರಾಪ್ತವಾಗುವಂತೆ ಮಾಡುತ್ತಾರೆ. ಹೀಗೆ ಯಾವ ವಿಧವಾದ ಆಚರಣೆಯಾದರೂ ಅದು ಮತದಾನ ಕೊಳ್ಳುವ ನಿಜವಾದ ಪದ್ಧತಿ ಎನಿಸಲಾರದು.

ಕಾಯ ಭಾವ, ಕಾಯ ಮೋಹವಳಿದು ಅವಿಶ್ರಾಂತವಾಗಿ ಚರಿಸುವವನೇ ದೇಶಭಕ್ತನೆಂದು, ರಾಷ್ಟ್ರದ ಕರ್ಮಯೋಗಿಯೆಂದು ಹೇಳಿಸಿ ಕೊಳ್ಳುವನು. ಜನ ಸೇವಾನಿರತ ಕರ್ಮಯೋಗಿಯು ಮಾನಾಪಮಾನಗಳಿಗೆ, ನಿಂದಾ ಸ್ತುತಿಗಳಿಗೆ ಸಮಭಾವ ವರಿತು, ಲೋಕ ಸುಖವೇ ತನ್ನ ಸುಖವೆಂದು, ಲೋಕ ಸೇವೆಯೇ ತನ್ನ ಅಂತಿಮ ಗುರಿಯೆಂದು ಭಾವಿಸಿ; ಪ್ರಪಂಚಮಯ ಕರ್ಮಯೋಗದಲ್ಲಿ ಅಖಂಡ ಸೇವಾ ಮಗ್ನನಾಗಿರುವನು.

ಯೋಗವೆಂದರೆ ಎರಡು ವಸ್ತುಗಳು ತಾದಾತ್ಮ್ಯ ಸ್ವರೂಪದಲ್ಲಿ ಅವಿನಾಭಾವ ಸಂಬಂಧ್ಧವಾಗಿ ಚರಿಸುವದು. ಹೂ, ಹೂವಿನಲ್ಲಿರುವ ಸುಗಂಧವು, ಸಕ್ಕರೆ ಸಕ್ಕರೆಯಲ್ಲಿಯ ಸಿಹಿಯು; ಇವು ಎರಡೂ ಭಿನ್ನವಾಗಿದ್ದರೂ ತಾದಾತ್ಮ್ಯ ಸ್ವರೂಪದಲ್ಲಿರುವಂತೆ; ರಾಷ್ಟ್ರದ ಪ್ರಜರ ಸುಖವೇ ಅವನ ಸುಖ, ಅವರ ದುಃಖವೇ ಅವನ ದುಃಖವಾಗಿದ್ದು, ಪ್ರಜರು ಸೇವ್ಯರಾಗಿ, ತಾನು ಸೇವಕನಾಗಿ ಆಚರಿಸುವನು ಇಂತಹ ಕರ್ಮಯೋಗಿಯೇ ನಿಜವಾದ ದೇಶ ಭಕ್ತ ನೆನಿಸುವನು.

ದೇಶಭಕ್ತಿ, ಕರ್ಮಯೋಗಾನುಷ್ಠಾನ ತತ್ಪರನಾಗಿ ಸರ್ವೋದಯ ಭಾವದಲ್ಲಿ ತ್ಯಾಗಮಯ ಜೀವಿಯಾಗಿ ವರ್ತಿಸುವವನಿಗೆ ರಾಷ್ಟ್ರದಲ್ಲಿಯ ಸಕಲ ಪದವಿಗಳು ತುಚ್ಛವಾಗಿ ಕಾಣಿಸುತ್ತವೆ. "ಸೇವಾ ಭಾವದ ದೇಶ ಭಕ್ತಿಯು" ಇದೊಂದೇ ಪದವಿಯು ಹಿರಿದಾಗಿ ಕಾಣಿಸುವದು ಇಂಥ ಮಹಾನುಭಾವಿಗೆ ಮತದಾನವಾಗಬೇಕು ಇಂತಹ ದೇಶ ಸೇವಾನಿರತತಪೋನಿಷ್ಠ ವ್ಯಕ್ತಿಯು ತನ್ನನ್ನು ಕುರಿತು, ಯನಗೆ ಮತ ಕೊಡಿರೆಂದು, ಮತ ಯಾಚನೆಯ ನೀಚ ಕೃತಿಯು ಗ್ರಹಿಸಲಾರನು.

ಯಾಚನೆಗಿಂತ ಕೀಳುತನವೆಂಬುದು ರಾಷ್ಟ್ರದಲ್ಲಿ ಯಾವದೂ ಇಲ್ಲ ಇಂತಹ ಕೀಳುತನ ಪಡೆದ ಯಾಚಕ ದುರ್ಜೀವಿಗಳಿಂದ ಲೋಕಕಲ್ಯಾಣವಾಗುವದು ಸಾಧ್ಯವೇ? ಸರ್ವಥಾ ಸಾಧ್ಯವಿಲ್ಲ. ಯಾಚಕರು ಲೋಕ ಪದವೀಧರರಾಗಿ ತಮ್ಮ ಐಹಿಕ ಜೀವನ ಸುಖ ಸಮೃದ್ಧಿಯ ತೃಷ್ಣಾ ಪೂರ್ತಿಗಾಗಿಯೇ ಹಗಲಿರುಳು ಚರಿಸುವರು. ಇಂತಹ ಮತ ಯಾಚಕರಿಗೆ ಪ್ರಜರು ಮತದಾನ ಸಲ್ಲಿಸುವದು ರಾಷ್ಟ್ರದ್ರೋಹವಾಗುವದು.

ಯಾವ ದೇಶ ಭಕ್ತನು ಅಖಂಡ ಸೇವಾ ಧುರೀಣನಾಗಿ ಲೋಕ ಕಲ್ಯಾಣಾರ್ಥ ಅವಿಶ್ರಾಂತವಾಗಿ ಚರಿಸುವನೋ ಆ ದೇಶ ಭಕ್ತ ಕರ್ಮಯೋಗಿಗೆ ಮತದಾನ ಸಲ್ಲಿಸಿ ಮುಂದು ವರಿಸುವದು ರಾಷ್ಟ್ರೀಯ ಸಂಸ್ಥೆಗಳ ಪರಮ ಕರ್ತವ್ಯವಾಗಿದೆ.

ಕಾಂಗ್ರೇಸ್, ಕಮ್ಯುನಿಷ್ಟ, ಸೋಸಿಯಾಲಿಷ್ಟ, ರಾಷ್ಟ್ರೀಯ ಸೇವಾ ಸಂಘ, ಜನಸಂಘ, ರಾಮರಾಜ್ಯ ಸರ್ವೋದಯ ಮತ್ತು ಹಿಂದೂ ಮಹಾ ಸಭಾ ಈ ಮೊದಲಾದ ರಾಷ್ಟ್ರೀಯ ಸಂಸ್ಥೆಗಳು ವಿಧಾಯಕ ಸ್ವರೂಪದಲ್ಲಿ ಕಾರ್ಯಕ್ಷಮತೆಯುಳ್ಳ ದೇಶ ಭಕ್ತನನ್ನು ಆರಿಸಬೇಕು. ಅವನ ಹೆಸರಿನಿಂದ ಸಂಚಿತ ನಿಧಿಯನ್ನಿರಿಸಬೇಕು. ಮನೆ ಮನೆಗೆ ಚರಿಸಿ ಇಂಥಾ ದೇಶಭಕ್ತ ಕರ್ಮಯೋಗಿಯನ್ನು ನಾವು ರಾಷ್ಟ್ರೀಯ ಸಂಸ್ಥೆಯ ವತಿಯಿಂದ ಆರಿಸಿ,

ಭಾವೀ ಜೀವನದ ರಾಷ್ಟ್ರ ಸೇವೆಗೆ ನಿಯುಕ್ತಗೊಳಿಸುವದಕ್ಕಾಗಿ ನಿಶ್ಚಯಿಸಿರುವೆವೆಂದು ತಿಳಿಸಬೇಕು. ರಾಷ್ಟ್ರೀಯ ಪ್ರಜಾ ಸಂಸ್ಥೆಗಳೇ ಮನೆ ಮನೆಗೆ ಚರಿಸಿ ಮತದಾನ ಪಡೆಯಬೇಕು. ಯಾವ ದೇಶ ಭಕ್ತನು ಬಹು ಮತದಿಂದ ಯಶಸ್ವಿಯಾಗಿ ಬರುವನೋ; ಆ ದೇಶ ಭಕ್ತನನ್ನು ಕುರಿತು ಪ್ರಜಾಸಂಸ್ಥೆಗಳು ನಿಮ್ಮ ಚುನಾವಣೆಯು ಯಶಸ್ವಿಯಾದರಿಂದ ಭಾವೀ ರಾಷ್ಟ್ರದ ಸುರಕ್ಷತೆಗೆ ತಾವು ಪದವೀಧರರಾಗಬೇಕೆಂದು ಪ್ರಾರ್ಥಿಸಲು; ಬಹು ಜನ ಸಮಾಜದ ಆಜ್ಞೆಯು ಶಿರಸಾಮಾನ್ಯವಾಗಿ ಆದರ ಭಾವದಲ್ಲಿ ಸ್ವೀಕರಿಸುವವನೇ ನಿಜವಾದ ದೇಶಭಕ್ತನೆನಿಸುವನು.

ಈ ಸುಮಾರ್ಗವನ್ನು ಅನುಸರಿಸದೇ ಭೋಗಲೋಲುಪ, ಪದಲೋಲುಪ, ಮತಯಾಚಕ ದುರ್ಜೀವಿಗಳಿಗೆ ಮತದಾನವಾದರೆ ಹಿಂಸಾ, ಅಸತ್ಯ, ಸ್ತೇಯ, ವ್ಯಭಿಚಾರ ಪ್ರಮಾದಗಳು ಕ್ರಮೇಣ ಹೆಚ್ಚುತ್ತ ರಾಷ್ಟ್ರದ ಅಂತರ್ಗತ ಶಾಂತಿಯು ಭಂಗವಾಗಿ ಅರಾಜಕತೆಯು ಪ್ರಾಪ್ತವಾಗುತ್ತದೆ. ದೇಶ ಭಕ್ತ ಕರ್ಮಯೋಗಿಗಳಿಗೆ ಮತದಾನ ಸಲ್ಲಿಸುವ ಮೂಲಕ ರಾಷ್ಟ್ರದ ಅಂತರ್ಗತ ಅಶಾಂತತೆಗೆ ತಡೆದು ವ್ಯಾಪಕ ಸುಖ ಶಾಂತಿಗೆ ಸಾಹಾಯಕವಾಗುವದು.

ರಾಷ್ಟ್ರದ ಬಹಿರ್ ಭಾಗ ನಿರೀಕ್ಷಿಸಲು, ಪಾಠಶಾಲಾ, ವಿದ್ಯಾಲಯ, ಮಹಾ ವಿದ್ಯಾಲಯ, ವಿಶ್ವ ವಿದ್ಯಾಲಯಗಳನ್ನು ಸ್ಥಾಪನೆಗೊಳಿಸಿ, ಅದು ತನ್ನ ಪ್ರಜರಿಗೆ ಎಲ್ಲ ವಿದ್ಯೆಗಳಲ್ಲಿ ನಿಪುಣತೆಯನ್ನು ಒದಗಿಸಿ ಕೊಟ್ಟದೆ. ಕೃಷಿ ವ್ಯವಸಾಯದ ಸುಧಾರಣೆಗಾಗಿ ನೀರಾವರಿ ಯೋಜನೆಯಿಂದ ಚಿಕ್ಕ ಪುಟ್ಟ ಸರೋವರಗಳು ಅಣೆಕಟ್ಟುಗಳು ನಿರ್ಮಿತವಾಗಿವೆ. ಯಾಂತ್ರಿಕ ಯೋಜನೆಯಿಂದ ಊಳುವ, ಹರಗುವ, ಬಿತ್ತುವ, ಕೊಯ್ಯುವ, ತೂರುವ ಎಲ್ಲ ಕಾರ್ಯಗಳು ಸುಗಮವಾಗಿ ಸಾಗುತ್ತಿವೆ. ಪುರ–ಪಟ್ಟಣಗಳಲ್ಲಿ, ಹಾದಿ ಬೀದಿಗಳಲ್ಲಿ, ಮನೆ–ಮಂದಿರಗಳಲ್ಲಿ, ಮಠ–ಆಶ್ರಮಗಳಲ್ಲಿ ವಿದ್ಯುದ್ದೀಪ-

ಗಳು ನಾನಾವಿಧವಾಗಿ ಪ್ರಕಾಶಿಸುತ್ತಿವೆ. ರಾಜ ಪ್ರಾಸಾದದಿಂದ ಹಳ್ಳಿ ಗುಡಿಸಲುಗಳಲ್ಲಿರುವ ಜನಗಳಿಗೆ ಮಾರ್ಗದ ಸುರಕ್ಷತೆಯು ಚನ್ನಾಗಿರಿಸಿದೆ. ಪ್ರಯಾಣ ಸೌಕರ್ಯಕ್ಕಾಗಿ ರೇಲ್ವೆ, ಮೋಟರ, ಸಾಯಕಲ್, ರಿಕ್ಷಾ, ಟ್ರಾ-ಮ್, ಆಕಾಶಯಾನ್, ಜಲಯಾನಾದಿ ವಾಹನಗಳ ಸುವ್ಯವಸ್ಥೆಯು ಚ-ನ್ನಾಗಿ ಮಾಡಲ್ಪಟ್ಟಿದೆ. ಮತ್ತು ಜೀವನಾವಶ್ಯಕ ವಸ್ತುಗಳ ಆಯಾತ ನಿರ್ಯಾತವು ಸುಗಮವಾಗಿ ಸಾಗುತ್ತಿದೆ. ಜಗತ್ತಿನ ಒಂದು ಕೊನೆಯ ವಾರ್ತೆಯು ಮತ್ತೊಂದು ಕೊನೆಗೆ ಒಂದು ನಿಮಿಷಾರ್ಧದಲ್ಲಿಯೇ ರೇಡಿಯೊ ಮೊದಲಾದ ಸಾಧನಗಳಿಂದ ತಿಳಿಯಹತ್ತಿದೆ. ನಿತ್ಯದ ವ್ಯವಹಾರ ಸುರಕ್ಷತೆಗೆ ಅಂಚೆಯ ವ್ಯವಸ್ಥೆಯು ಚನ್ನಾಗಿ ಮಾಡಲ್ಪಟ್ಟಿದೆ. ರಾಷ್ಟ್ರದ ಆಂತರಿಕ ಶಾಂತಿ–ಸ್ಥಾಪನೆಗೆ ಅನೇಕ ನ್ಯಾಯ ಸಂಘ ಮತ್ತು ಪೋಲೀಸ ಕರ್ಮಚಾರಿಗಳ ಸಂಖ್ಯೆಯು ಬಹು ಪ್ರಮಾಣವಾಗಿರಿಸಿದೆ. ಮನೋರಂಜಕ ಸಾಧನೆಗಳಾದ ನಾಟಕ, ಸಿನೇಮಾ, ಮೊದಲಾದವುಗಳು ವಿಪುಲವಾಗಿವೆ. ಆದರೆ ಮಾನವನ ಆಂತರಿಕ ನೈತಿಕ ಸುಧಾರಣೆಯು ಕ್ರಮೇಣ ಕೆಡುತ್ತ ವ್ಯಕ್ತಿಗತ ಜೀವನ ಚರಿತಾರ್ಥ ಸಾಗಿಸುವದು ಕಷ್ಟಪ್ರದವಾಗಿದೆ. ಪ್ರಜಾ-ಪ್ರಭುತ್ವ ರಾಷ್ಟ್ರದಲ್ಲಿ ಹಿಂಸಾ, ಕೊಲೆ, ದ್ವೇಷ, ಅಸೂಯೆ, ದಂಭ, ಅಸತ್ಯ ಭಾಷಣ, ಮಿಥ್ಯಾಸಾಕ್ಷಿ, ಮಿಥ್ಯಾಚರಣ, ಪರಧನಸ್ತ್ರೀಯ ನಾನಾವಿಧ ಭೋಗ ದ್ರವ್ಯಗಳ ಅಪಹಾರವು ದಿನಂಪ್ರತಿ ಮಿತಿ ಇಲ್ಲದೆ ಸಾಗುತ್ತಿವೆ. ಸ್ತ್ರೀ-ಪುರು-ಷರು ಅನೈಸರ್ಗಿಕವಾದ ವ್ಯಭಿಚಾರ ಪ್ರವೃತ್ತಿಯಲ್ಲಿ ಮುಚ್ಚು ಮರೆಯಾ-ಗಿರದೆ ನೈಸರ್ಗಿಕ ಪ್ರವೃತ್ತಿಯ ಪತಿ-ಪತ್ನಿಯರಂತೆ ನಿರ್ಭಯರಾಗಿ ಪ್ರತ್ಯಕ್ಷ ವರ್ತಿಸುತ್ತಾರೆ. ಇನ್ನೂ ಎಷ್ಟೋ ಅಪರಾಧಗಳು ಅನಿರ್ಣಿತ ಅವರ್ಣಿತ-ವಾಗಿವೆ.

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ನಾಲ್ಕು ಧರ್ಮ ನಿಯಮಗಳ ಶಿಕ್ಷಣ ಮೂಲಕ ಪ್ರಜರ ಮನೋಭಾವನೆಗಳು ಪರಿಶುದ್ಧವಾಗಿ ರಾಷ್ಟ್ರದಲ್ಲಿಯ ಅನಿಷ್ಟ ದುರಿತಗಳಿಂದಾಗುವ ಅಶಾಂತತೆಗಳು ತಡೆಯುತ್ತವೆ.

ನಂತರ ಮಾನವ ಧರ್ಮದ ಉತ್ತರಾಂಗಗಳಾದ ದಯಾ, ಕ್ಷಮಾ, ದಾನ, ಪೂಜಾ, ಜಪ, ಮತ್ತು ಧ್ಯಾನ ಈ ಆರು ನಿಯಮಗಳ ಶಿಕ್ಷಣದಿಂದ ರಾಷ್ಟ್ರದಲ್ಲಿ ಪ್ರಜರ ವೈಯಕ್ತಿಕ ಸುಖ-ಶಾಂತಿ ಹಾಗೂ ರಾಷ್ಟ್ರದ ವ್ಯಾಪಕ ಸುಖ-ಶಾಂತಿಯು ನಿರ್ಮಾಣವಾಗುತ್ತದೆ. ರಾಷ್ಟ್ರದ ಎಲ್ಲ ಪ್ರಜರಿಗೆ ಈ ಶಿಕ್ಷಣವು ಲಭಿಸದ ವಿನಃ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸುಖ-ಶಾಂತಿ ಸ್ಥಾಪನೆಯಾಗುವದು ಸಾಧ್ಯವಿಲ್ಲ.

ದಯಾ :- ಮಾತಾ, ಪಿತಾ, ಗುರು, ಒಡೆಯ, ರಾಜಾ, ಈಶ್ವರ ಮೊದಲಾದವರ ದಯೆಯು ನನ್ನ ಮೇಲಿರಲೇದು ಪ್ರತಿಯೊಬ್ಬನು ಇಚ್ಛಿಸುತ್ತಾನೆ. ಇದರಿಂದ ದಯದ ಜ್ಞಾನವು ಮಾನವನಿಗೆ ನೈಸರ್ಗಿಕವಾಗಿದೆ. ( ವರಿಷ್ಠ ಜನರ ದಯವಾದರೆ ಮನಸ್ಸಿಗೆ ಸುಖ-ಶಾಂತಿಯಾಗುತ್ತದೆ. ದಯವಾಗದಿದ್ದಲ್ಲಿ ಅಶಾಂತಿ.)

ಕ್ಷಮಾ :- ಪ್ರತಿಯೊಬ್ಬನು ತನ್ನಿಂದ ಅಪರಾಧವು ಸಂಭವಿಸಲು ಆ ಅಪರಾಧ ಸಂಬಂಧವಾಗಿ ತನಗೆ ಶಿಕ್ಷೆಯಾಗದೆ ಕ್ಷಮೆಯಾಗ ಬೇಕೆಂದು ಇಚ್ಛಿಸುತ್ತಾನೆ. ಇದರಿಂದ ಕ್ಷಮೆಯ ಜ್ಞಾನವು ಮಾನವನಿಗೆ ನೈಸರ್ಗಿಕವಾಗಿದೆ. ( ತನ್ನ ಅಪರಾಧ ಸಂಬಂಧವಾಗಿ ಕ್ಷಮೆಯಾದರೆ ಮನಸ್ಸಿಗೆ ಸುಖ-ಶಾಂತಿ ಯಾಗುತ್ತದೆ. ಶಿಕ್ಷೆಯಾದರೆ ಅಶಾಂತಿ. )

ದಾನ :- ಪ್ರತಿಯೊಬ್ಬನು ತನಗಿಷ್ಟವಾದ ಭೋಗೋಪಭೋಗ ಪದಾರ್ಥಗಳು ಪರರಿಂದ ಸದಾ ದೊರೆಯುತ್ತಿರಲೆಂದು ಇಚ್ಛಿಸುತ್ತಾನೆ. ಇದರಿಂದ ದಾನದ ಜ್ಞಾನವು ಮಾನವನಿಗೆ ನೈಸರ್ಗಿಕವಾಗಿರುತ್ತದೆ. (ತನ್ನ ಇಚ್ಛೆಯ ಪೂರ್ತಿಗಾಗಿ ಪರರ ಸಹಾಯ (ದಾನ) ವಾದಲ್ಲಿ ಮನಕ್ಕೆ ಸುಖ-ಶಾಂತಿಯಾಗುತ್ತದೆ. ಸಹಾಯ (ದಾನ) ವಾಗದಿದ್ದಲ್ಲಿ ಅಶಾಂತಿ. )

ಪೂಜಾ :- ಪ್ರತಿಯೊಬ್ಬನು ತನ್ನ ವಿಷಯದಲ್ಲಿ ಎಲ್ಲರು ಆದರ-[ಪೂಜಾ]- ಭಾವನೆಯನ್ನಿಡಲಿ, ತನ್ನ ಗೌರವ -[ಪೂಜಾ]- ಮಾಡಲಿ; ತನ್ನ

ನ್ನು ಸತ್ಕರಿಸಲಿ, ಒಂದಿಸಲಿ, ಎಂದು ಹೀಗೆ ಇಚ್ಛಿಸುತ್ತಾನೆ. ಇದರಿಂದ ಪೂಜೆಯ ಜ್ಞಾನವು ಮಾನವನಿಗೆ ನೈಸರ್ಗಿಕವಾಗಿರುತ್ತದೆ. (ಪರರು ತನಗೆ ಗೌರವಿಸಿ, [ಪೂಜಾ]- ಆದರಿಸಿ, ಸತ್ಕರಿಸಿ, ಒಂದಿಸಿದಲ್ಲಿ, ಮನಕ್ಕೆ ಸುಖ-ಶಾಂತಿಯಾಗುತ್ತದೆ. ಅನಾದಳವಾದರೆ ಅಶಾಂತಿ. )

ಜಪ :- ಪ್ರತಿಯೊಬ್ಬನು ಪರರಿಂದ ತನ್ನ ಸ್ತುತಿ ಕೀರ್ತಿ ಯಾಗಲೆಂದು ಇಚ್ಛಿಸುತ್ತಾನೆ. ತನ್ನ ಗುಣ ಗೌರವದ ಸ್ತುತಿ ಸ್ತೋತ್ರದಿಂದ ಸಂತುಷ್ಟನಾಗುತ್ತಾನೆ. ಇದರಿಂದ ಜಪದ ಜ್ಞಾನವು ಮಾನವನಿಗೆ ನೈಸರ್ಗಿಕವಾಗಿರುತ್ತದೆ. ( ಪರರಿಂದ ತನ್ನ ಸ್ತುತಿ- [ಜಪ]- ಸ್ತೋತ್ರವಾದರೆ, ಮನಕ್ಕೆ ಸುಖ-ಶಾಂತಿಯಾಗುತ್ತದೆ. ಅಪಕೀರ್ತಿ ನಿಂದೆಯಾದರೆ ಅಶಾಂತಿ )

ಧ್ಯಾನ :- ಪ್ರತಿಯೊಬ್ಬನು ತನ್ನ ವ್ಯವಹಾರದಲ್ಲಿಯ ಆವಶ್ಯಕ ವಸ್ತುಗಳನ್ನು ಕಂಡು ಧ್ಯಾನದಲ್ಲಿರಿಸುತ್ತಾನೆ. ಯಾವದೇ ಒಂದು ವಿಚಾರದ ಮನನವು ಸದಾ ಮಾಡುತ್ತಾನೆ. ಮನನದ ವಿಚಾರ ವೃತ್ತಿಯು ದೃಢವಾಗಿ ಧ್ಯಾನದಲ್ಲಿರಿಸುತ್ತಾನೆ. ಧ್ಯಾನದಲ್ಲಿರುವ ವಿಚಾರವು ಕೃತಿಯಲ್ಲಿ ತರುತ್ತಾನೆ. ಇದರಿಂದ ಧ್ಯಾನದ ಜ್ಞಾನವು ಮಾನವನಿಗೆ ನೈಸರ್ಗಿಕವಾಗಿರುತ್ತದೆ. [ಧ್ಯಾನದಲ್ಲಿಯ ಧ್ಯೇಯು ವಸ್ತುಗಳು ಪ್ರಾಪ್ತವಾದರೆ ಮನಕ್ಕೆ ಸುಖ-ಶಾಂತಿಯಾಗುತ್ತದೆ. ಪ್ರಾಪ್ತವಾಗದಿದ್ದಲ್ಲಿ ಅಶಾಂತಿ. )

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಈ ಪೂರ್ವ ಭಾಗದ ನಾಲ್ಕು ನಿಯಮಗಳ ಉಲ್ಲಂಘನೆ ಮಾಡಿ ಅಶಾಂತತೆಯನ್ನು ನಿರ್ಮಿಸುವವರಿಗೆ ರಾಷ್ಟ್ರವು ಶಿಕ್ಷೆಯನ್ನು ವಿಧಿಸುತ್ತದೆ.

ಉತ್ತರ ಭಾಗದ ದಯಾ, ಕ್ಷಮಾ, ದಾನ, ಪೂಜಾ, ಜಪ ಮತ್ತು ಧ್ಯಾನ ಈ ಆರು ನಿಯಮಗಳು ಪರರ ವಿಷಯವಾಗಿ ಪಾಲಿಸಲಿ ಅಥವಾ ಪಾಲಿಸದಿರಲಿ, ರಾಷ್ಟ್ರದ ಶಾಸಕ ಸಂಘವು ಆ ಮನುಷ್ಯನಿಗೆ ಅಪರಾಧಿ,

ನಿರಪರಾಧಿಯೆಂದು ಯಾವದಕ್ಕೂ ಗ್ರಹಿಸುವದಿಲ್ಲ. ಅದರ ಸಂಬಂಧವಾಗಿ ಅವನು ಪೂರ್ಣ ಸ್ವತಂತ್ರನಿರುತ್ತಾನೆ. ಮನುಷ್ಯನಿಗೆ ಸುಖ-ಶಾಂತಿಯು ಬೇಕು. ಮತ್ತು ಅದು ಪ್ರಾಪ್ತ ಮಾಡುವ ಕ್ರಮದಲ್ಲಿ ಎಲ್ಲ ಮಾನವರು ಪರಸ್ಪರ ಸಾಪೇಕ್ಷಕರಾಗಿ ಪರಾವಲಂಬಿಯಾಗಿದ್ದಾರೆ.

ರಾಷ್ಟ್ರದ ಎಲ್ಲ ಪ್ರಜರು ಪರಸ್ಪರ ತಮ್ಮಲ್ಲಿ ದಯಾ, ಕ್ಷಮಾ, ದಾನ, ಪೂಜಾ, ಜಪ ಮತ್ತು ಧ್ಯಾನ ಈ ಆರು ನಿಯಮಗಳನ್ನು ಉಪಯೋಗಿಸದ ವಿನಃ ರಾಷ್ಟ್ರದಲ್ಲಿ ಆಂತರಿಕ ಸುಖ-ಶಾಂತಿಯು ಸಂಭವಿಸುವದಿಲ್ಲ.

ಉದಾ :–ಯಾವನೊಬ್ಬನು ಅನ್ನ-ವಸ್ತ್ರದ ಅಭಾವವಾಗಿ ಪೀಡಿತನಾಗುತ್ತಿರಲು ಸುಸಂಪನ್ನರು ಅನ್ನ ವಸ್ತ್ರಾದಿಗಳು ದಯಾಭಾವದಲ್ಲಿ ಕೊಟ್ಟು ಆ ವ್ಯಕ್ತಿಗೆ ಸಂರಕ್ಷಿಸುವದು ಅವರ ಕರ್ತವ್ಯವಾಗಿದೆ.

ಕುರುಡನು ಮಾರ್ಗತಪ್ಪಿ ಅಮಾರ್ಗಿಯಾಗಿ ಚರಿಸುವಲ್ಲಿ ಸನೇತ್ರರು ಮಾರ್ಗ ತೋರಿಸಿ ದಯದ ಉಪಯೋಗ ಮಾಡುವದು ಅವರ ಕರ್ತವ್ಯವಾಗಿದೆ. ಒಂದು ಪಕ್ಷ ಅವರಿಂದ ದಯಾಭಾವದ ಉಪಯೋಗವಾಗದಿದ್ದಲ್ಲಿ ಸಂಘ ರಾಷ್ಟ್ರದ ಶಾಸನ ದೃಷ್ಟಿಯಿಂದ ಅವರು ಅಪರಾಧಿಯಾಗಿದ್ದರೂ ಅದು ಮಾನವತೆಯ ಕರ್ತವ್ಯ ಪರಾಙ್ಮುಖತೆಯಾಗುತ್ತದೆ.

ಮಾನವನು ಜ್ಞಾನಸೃಷ್ಟಿಯೊಳಗಿನ ಪ್ರಾಣಿಯಾದರಿಂದ. ರಾಷ್ಟ್ರದಲ್ಲಿಯ ಕುರುಡ, ಕಿವುಡ, ಅನಾಥ, ರೋಗೀ, ವೃದ್ಧ, ದುಃಖೀ ಮೊದಲಾದ ಜನಗಳ ಸೇವೆಗಾಗಿ ಅವನು ತನ್ನಲ್ಲಿಯ ಸ್ವಾಭಾವಿಕ ವಾಗಿರುವ ದಯಾ, ಕ್ಷಮಾ, ಈ ನಿಯಮಗಳ ಉಪಯೋಗವು ಆ ಪತಿತ ಜನಗಳಲ್ಲಿ ಕರ್ತವ್ಯವೆಂದು ಪಾಲಿಸದವಿನಃ ಅವರು ಸಂತುಷ್ಟರಾಗಿ ಶಾಂತತೆಯ ಪೂರ್ವಕ ಜೀವಿಸಿ ವರ್ತಿಸಲಾರರು.

ಅಹಿಂಸಾದಿ ದಶನಿಯಮುಗಳು ಎಲ್ಲ ಮಾನವರಲ್ಲಿ ಜನ್ಮ-ಸಿದ್ಧ ಸ್ವಾಭಾವಿಕವಾಗಿದ್ದರೂ, ಅವುಗಳನ್ನು ಭಿನ್ನ ಜೀವಿಗಳಲ್ಲಿ ಉಪಯೋ-ಗಿಸಿ ಪರಿಪಾಲಿಸುವವಕ್ಕೆ ರಾಷ್ಟ್ರದ ಎಲ್ಲಪ್ರಜರು ಪೂರ್ಣತಃ ಪಾತ್ರತಾ ಸಂಪನ್ನರಾಗಿರುವದಿಲ್ಲ. ಕಾರಣ ವಿಃ ಧಜೀವ:ಗಳ ಕರ್ಮಸಂಸ್ಕಾರಮೂಲಕ ಅವರ ಭಾವ, ಪ್ರಾಣಗಳು ಕರ್ಮಮಯ ಆವರಣವಾಗಿ ಜಡಮತಿ-ಯ ರಾಗಿರುತ್ತಾರೆ. ಕಾರಣ ಅವರ ಅಂತರಾಳವಲ್ಲಿ "ಓ ಜ" ವೆಂಬ ಅತಿ-ಸೂಕ್ಷ್ಮಶಕ್ತಿಯ ಅಭಾವ ವಾಗಿರುತ್ತವೆ.

ಶುದ್ಧ ಸಾತ್ವಿಕರಾದ ಯಾವ ಮಾನವರು ಮಾತೃ ಭಕ್ತಿ, ಪಿತೃ-ಭಕ್ತಿ, ಆಚಾರ್ಯಭಕ್ತಿ, ಅತಿಥಿ ಭಕ್ತಿ, ಈಶ ಭಕ್ತಿ, ದೇಶಭಕ್ತಿ, ಯುಕ್ತರಾಗಿ ಜೀವನ ನಿರ್ವಹಣದ ಎಲ್ಲ ಕಾರ್ಯಗಳು ಶಾಂತಿ ಸಂಯಮತೆಪೂರ್ವಕ ಆಚ-ರಿಸುತ್ತಾರೆಯೋ; ಅವರಿಗೆ ಇದ್ದ ಸ್ಥಿತಿಗಿಂತಲೂ ಉನ್ನತಾವಸ್ಥೆಗೆ ಗಮಿಸುವ ಹಾಗೂ ಪುನರಾವರ್ತರಹಿತ ಶಾಶ್ವತಹಿತ ಮೋಕ್ಷ ಸುಖವನ್ನೀಯುವ ಸಾಧನೆ-ಯಾದ ಆತ್ಮಾ, ಅನಾತ್ಮಾ ವೆಂಬೀ ವಿಚಾರವು ಅವಶ್ಯಕವಾಗಿದೆ. ಆ ಪರಿಶುದ್ಧ ಆತ್ಮಜ್ಞಾನದ ಪ್ರಾಪ್ತಿಗಾಗಿಯೂ, "ಓ ಜ" ದ ಅವಶ್ಯಕತೆಯಾ-ದರಿಂದ ಆ "ಓ ಜ" ದ ವಿಕಾಸಕ್ಕೆ ದಾನ, ಪೂಜಾ, ಜಪ, ಧ್ಯಾನ ಇವು ನಾಲ್ಕು ಉತ್ತರೋತ್ತರ ಅಧಿಕಾಧಿಕ ಮುಖ್ಯ ಸಾಧನಗಳಾಗಿವೆ.

"ಓ ಜೋಸಿ ಓ ಜೋ ಮಯಿ ಧೇಹಿ"

ಓಜರೂಪಿ ಪರಮಾತ್ಮನೆ ಆ ನಿನ್ನ ಓಜ ಶಕ್ತಿಯನ್ನು ಯನ್ನಲ್ಲಿ ಅನುಗ್ರಹಿಸು. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮ-ಚರ್ಯ, ದಯಾ, ಕ್ಷಮಾ, ಈ ಆರು ನಿಯಮಗಳ ಆಚರಣೆಯಿಂದಲೂ ಸಾಧಕನಲ್ಲಿ ಸಾಮಾನ್ಯ ಓ ಜ ದ ನಿರ್ಮಿತಿಯಾಗುತ್ತದೆ. ಆದರೆ ದಾನ, ಪೂಜಾ, ಜಪ, ಧ್ಯಾನ ಇವುಗಳ ಮೂಲಕ ವಿಶೇಷ "ಓಜ" ದ ಉತ್ಪತ್ತಿಯಾಗುತ್ತದೆ.

ಅಹಿಂಸಾದಿ ದಶ ನಿಯಮಗಳು ವ್ಯಾಪಕ ಸ್ವರೂಪದಿಂದ ತರುವ ಉದ್ದೇಶಕ್ಕಾಗಿ ಯಾವ ಪ್ರಮೇಯ,ಪ್ರಯೋಗಗಳು ಉಪಯೋಗಿಸಲ್ಪಡುತ್ತ-ವೆಯೋ; ಅವುಗಳಿಗೆ "ಸದ್ಧರ್ಮ" "ಮಾನವ ಧರ್ಮ" ಅಥವಾ "ಧರ್ಮ ವಿಜ್ಞಾನ"ವೆಂದು ಹೇಳಲ್ಪಡುತ್ತದೆ.

ಜಗತ್ತಿನಲ್ಲಿ ಮಾನವ ಧರ್ಮವು ಒಂದೇ ಒಂದಾಗಿರುವದು. ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಅಗಸ್ತ್ಯ ಮಹಾಮುನಿಗಳಿಗೆ"ಸಿದ್ಧಾಂತ-ಶಿಖಾಮಣಿ" ನಾಮಕ ಸಂಸ್ಕೃತ ಗ್ರಂಥದ ಧರ್ಮಾಚಾರ ಸ್ಥಲದಲ್ಲಿ;-

ಅಂಹಿಸಾ ಸತ್ಯ ಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜಾ, ಜಪ, ಮತ್ತು ಧ್ಯಾನ ಈ ಹತ್ತು ನಿಯಮಗಳ ಸಂಗ್ರಹಕ್ಕೆ ಧರ್ಮವೆಂದು ಬೋಧಿಸಿರುವರು.

ಈ ಸೃಷ್ಟಿಯ ಜಡಚೇತನ ವಸ್ತುಗಳಲ್ಲಿ ಒಂದೊಂದು ಗುಣಧ-ರ್ಮವು ಸ್ವಾಭಾವಿಕವಾಗಿದ್ದುದು ಕಂಡು ಬರುತ್ತದೆ. ಪೃಥ್ವಿಯಲ್ಲಿ ಧಾರಣ ಧರ್ಮವು, ಜಲದಲ್ಲಿ ಶೀತಲ ಧರ್ಮವು, ಅಗ್ನಿಯಲ್ಲಿ ದಾಹಕ ಧರ್ಮವು, ವಾಯುವಿನಲ್ಲಿ ಸ್ಪಂದನ ಧರ್ಮವು, ಆಕಾಶದಲ್ಲಿ ವ್ಯಾಪನ ಧರ್ಮವು, ಔಷಧಗಳಲ್ಲಿ ಮಹಾ ಮಹಾ ರೋಗ ನಿವೃತ್ತಿಯ ಧರ್ಮವು, ವಜ್ರದಲ್ಲಿ ಶಿಲೆಯನ್ನು ಭೇದಿಸುವ ಧರ್ಮವು, ವಿದ್ಯುತ್ತಿನಲ್ಲಿ ನಾನಾವಿಧ ಯಂತ್ರ ಸಂ-ಚಾಲನ ಧರ್ಮವು, ಸಕ್ಕರೆಯಲ್ಲಿ ಸಿಹಿ ಧರ್ಮವು ಹೀಗೆ ಒಂದೊಂದು ವಸ್ತುವಿನಲ್ಲಿ ಒಂದೊಂದು ಗುಣ ಧರ್ಮವು ಸ್ವಭಾವ ಸಿದ್ಧವಾಗಿರುವಂತೆ; ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜಾ, ಜಪ ಮತ್ತು ಧ್ಯಾನ ಈ ಹತ್ತು ಗುಣಧರ್ಮಗಳು ಮಾನವನಲ್ಲಿ ಸಹಜ ಸ್ವಭಾವ ವಾಗಿವೆ. ಸೃಷ್ಟಿಯ ಜಡ ಚೇತನ ಸರ್ವ ವಸ್ತುಗಳಲ್ಲಿ ಒಂದೊಂದು ಗುಣ ಧರ್ಮವು ಪೂರಿತವಾದರಿಂದ ಅವುಗಳೆಲ್ಲ ಜಡವಾಗಿವೆ.

ಪಶು, ಪಕ್ಷಿ, ಕ್ರಿಮಿ-ಕೀಟಕಗಳು ಚೇತನಾತ್ಮಕ ವಾಗಿದ್ದರೂ; ಆಹಾರ, ನಿದ್ರಾ, ಭಯ, ಮೈಥುನ ವೆಂಬೀ ಸಾಮಾನ್ಯ ಜ್ಞಾನ ಮೂಲಕ ಜೀವನ ಸಾಗಿಸುವದಕಷ್ಟೇ ಅವುಗಳಲ್ಲಿಯ ಮನೋಬಲದ ಉಪಯೋಗವಾಗುತ್ತಿದೆ. ಹೊರತು ಇದ್ದ ಸ್ಥಿತಿಗಿಂತಲೂ ಉನ್ನತ ಅವಸ್ಥೆಗೆ ಗಮಿಸುವ ಕರ್ತೃತ್ವಶಕ್ತಿಯು ಇಲ್ಲವಾದರಿಂದ ಅವು ಸಾಮಾನ್ಯ ಜಡವೆಂದೇ ಕಲ್ಪಿಸಬೇಕಾಗಿದೆ.

ಮಾನವನು ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಮತ್ತು ಕಾಯ, ಮನ, ಭಾವಗಳಿಂದ ಶ್ರೇಷ್ಠನಾಗಿ ಪುಣ್ಯ ಕರ್ಮಗಳ ಮೂಲಕ ಉನ್ನತಾವಸ್ಥೆಗೆ ಗಮಿಸುವ ಹಾಗೂ ಪಾಪ ಕರ್ಮಗಳಿಂದ ಅವನತಾವಸ್ಥೆಗೆ ಗಮಿಸುವ ಕರ್ತೃತ್ವ ಶಕ್ತಿಯುಳ್ಳವನಾಗಿರುವನು. ವಿಶೇಷ ಚೇತನಾತ್ಮಕ ಪ್ರಾಣಿಯಂದರೆ ಮಾನವನೊಬ್ಬನೆ ಇನ್ನುಳಿದವುಗಳೆಲ್ಲ ಜಡವಾಗಿವೆ. ಕಾರಣ ಮಾನವನು ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜಾ, ಜಪ, ಮತ್ತು ಧ್ಯಾನ ಈ ಹತ್ತು ಗುಣ ಧರ್ಮಗಳಿಂದ ಸಂಗ್ರಹವಾಗಿರುವ ಪ್ರಯುಕ್ತ ಸೃಷ್ಟಿಯ ಸಕಲ ಪ್ರಾಣಿಗಳಲ್ಲಿ ಅಗ್ರಜನಾಗಿರುವನು. ಇವನಲ್ಲಿಯ ಸ್ವಾಭಾವಿಕ ಗುಣಧರ್ಮಗಳಿಗೆ ಅನೈಸರ್ಗಿಕ ಭಾವದ ಆವರಣವಾಗಲು, ಧರ್ಮ ಪ್ರವೃತ್ತಿಯಿಂದ ದೂರನಾಗಿ ಪತಿತನಾಗುವನು. ಆದರಿಂದ ಇಂತಹ ಮಾನವನ ಸುಖ-ಶಾಂತಿಗೆ ಮರವು ಆಗಬಾರದೆಂದು ಮಹಾ ಆಚಾರ್ಯರು ಮಾನವನ ಜನ್ಮಸಿದ್ಧ ಸ್ವಾಭಾವಿಕ ಧರ್ಮದ ದಶನಿಯಮಗಳು, ಭಿನ್ನ ಜೀವಿಗಳಲ್ಲಿ, ಭಿನ್ನಾವಸ್ಥೆಯಲ್ಲಿ, ಜ್ಞಾನ, ಕ್ರಿಯಾ, ಸ್ವರೂಪದಲ್ಲಿ ಉಪಯೋಗಿಸಲ್ಪಡುವದಕ್ಕೆ ಮಾನವಧರ್ಮವೆಂದು ಬೋಧಿಸಿರುವರು.

ಈ ದಶನಿಯಮಗಳಲ್ಲಿ ಕೆಲವರು **"ಅಹಿಂಸಃ ಪರಮೋಧರ್ಮಃ'** ಅಹಿಂಸೆ ಒಂದಕ್ಕೇ ಪರಮ ಧರ್ಮವೆಂದು; **"ನಾಸ್ತಿ ಸತ್ಯಾತ್ ಪರೋ**

ಧರ್ಮಃ" ಸತ್ಯವೇ ಶ್ರೇಷ್ಠ ಧರ್ಮವೆಂದು, "ಬ್ರಹ್ಮಚರ್ಯಂ ಪರಂ ತಪಃ" ಬ್ರಹ್ಮಚರ್ಯವೇ ಶ್ರೇಷ್ಠ ಧರ್ಮವೆಂದು "ದಯಾ ಧರ್ಮಸ್ಯ ಜನ್ಮಭೂಮಿಃ" ದಯವೇ ಶ್ರೇಷ್ಠ ಧರ್ಮವೆಂದು "ಕ್ಷಮಾ ವಾನೇವ ಸರ್ವ ಸಾಧ ಯತ್ರಿ" ಕ್ಷಮಾ ನಿಯಮದಿಂದಲೇ ಸರ್ವಾರ್ಥವು ಸಿದ್ಧಿಸುವದೆಂದು "ನಾಸ್ತಿ-ದಾನಾತ್ ಪರಂ ಧರ್ಮಃ" ದಾನವೇ ಶ್ರೇಷ್ಠ ಧರ್ಮವೆಂದು, ಮತ್ತೆ ಕೆಲವರು"ಪೂಜಾ, ಜಪ, ಧ್ಯಾನ, ಸಂಧ್ಯಾ, ಹೋಮಾದಿಗಳಿಗೆ ಶ್ರೇಷ್ಠ ಧರ್ಮವೆಂದು ಬೋಧಿಸಿರುವರು. ಅನೇಕ ಮಹಾತ್ಮರು, ವಿಭೂತಿ-ಗಳು ಧರ್ಮಮೂರ್ತಿಯ ಅವಯವಗಳಾದ ಒಂದೊಂದು ನಿಯಮಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು ಅದನ್ನೇ ಶ್ರೇಷ್ಠ ಧರ್ಮವೆಂದು ಹೇಳಿರುವರು.

ವಾಕ್, ಪಾಣಿ, ಪಾದ, ಗುದ, ಗುಹ್ಯ ಪಂಚ ಕರ್ಮೇಂದ್ರಿಯ-ಗಳು; ಶ್ರೋತ್ರ, ತ್ವಚ, ನೇತ್ರ ಘ್ರಾಣ, ರಸನೆ ಪಂಚ ಜ್ಞಾನೇಂದ್ರಿಯಗಳು ಹೀಗೆ ಒಟ್ಟುಗೂಡಿಸಿ ಈ ದಶ ಇಂದ್ರಿಯಗಳ ಸಮೂಹಕ್ಕೆ ಮಾನವ ಶರೀರ-ವೆಂದು ತಿಳಿಯುವದರ ಬದಲಾಗಿ; ಕೇವಲ ಒಂದು ಕೈಗೆ ಪೂರ್ಣ ಶರೀರ-ವೆಂದು, ಕೇವಲ ಒಂದು ಪಾದಕ್ಕೆ ಪೂರ್ಣ ಶರೀರವೆಂದು, ಕೇವಲ ಒಂದು ನೇತ್ರಕ್ಕೆ ಪೂರ್ಣ ಶರೀರವೆಂದು, ಹೀಗೆ ಒಂದೊಂದು ಅವಯವಗಳಿಗೇ ಪೂರ್ಣ ದೇಹವೆಂದು ಕಲ್ಪಿಸುವದು ಅನುಚಿತವಾಗಿರುವಂತೆ, ಧರ್ಮದ ಅಂಗಗಳಾದ ಹತ್ತು ನಿಯಮಗಳಲ್ಲಿ ಯಾವದೊಂದು ನಿಯಮಕ್ಕೆ ಪೂರ್ಣ ಧರ್ಮವೆಂದು ಕಲ್ಪಿಸುವದು ಧರ್ಮಜ್ಞಾನದ ಅಭಾವವೇ ಮೂಲ ಕಾರಣವಾಗಿರುವದೇ ಹೊರತು ಬೇರೊಂದಿರ.ವದಿಲ್ಲ.

ಶಿವೋಪಾಸಕರಿಗೆ ಶೈವ, ವಿಷ್ಣು ಉಪಾಸಕರಿಗೆ ವೈಷ್ಣವ, ಗಣ-ಪತಿ ಉಪಾಸಕರಿಗೆ ಗಾಣಪತ್ಯ, ಶಕ್ತಿ ಉಪಾಸಕರಿಗೆ ಶಾಕ್ತ, ಸೂರ್ಯ ಉಪಾಸಕರಿಗೆ ಸೌರರೆಂದು ಹೀಗೆ ಉಪಾಸನಾ ಭೇದಗಳಿಂದ ಭಿನ್ನ ಭಿನ್ನ ಮತದವರೆಂದು ಕಲ್ಪಿಸಿಕೊಂಡರು. ಆದರೆ ಶ್ರೀ ಜಗದಾಚಾರ್ಯರು ಪೂಜಾ

ಮಾಡು ಎಂದು ಅಪ್ಪಣೆವಿತ್ತರು. ಇಂತಹ ವಿಶಿಷ್ಟ ದೇವತೆಯನ್ನೇ ಪೂಜಿಸು, ಅನ್ಯ ದೇವತೆಯನ್ನು ಪೂಜಿಸಬೇಡವೆಂದು ಹೇಳಿರುವದಿಲ್ಲ. ನಿನಗೆ ಮೆಚ್ಚಿಗೆಂಾದ ಯಾವ ದೇವರ ಪೂಜೆಯನ್ನಾದರೂ ಮಾಡು.

ಜಪವನ್ನು ಮಾಡು. ಇಂತಹ ವಿಶಿಷ್ಟ ದೇವರ ನಾಮ ಜಪವನ್ನೇ ಮಾಡು. ಇನ್ನುಳಿದ ದೇವತೆಗಳ ಮಂತ್ರ ಜಪವು ಬೇಡವೆಂದು ಹೇಳದೆ ಕೇವಲ ಜಪ ಮಾಡು, ಅಂದರೆ ನಿನಗಿಷ್ಟವಾದ ಯಾವ ಮಂತ್ರವನ್ನಾದರೂ ಜಪಿಸು ಎಂದು ಮಹಾ ಅಚಾರ್ಯರು ಬೋಧಿಸಿರುವರು.

ಗಣಿತ ಶಾಸ್ತ್ರದ ಮೂಲ ಸಿದ್ಧಾಂತವು ಆಯ, ವ್ಯಯ, ಅವಶೇಷವೆಂದು ಮೂರು ಭಾಗವಾಗಿದೆ. ಗೋಧಿ, ಜೋಳ, ಅಕ್ಕಿ ಮೊದಲಾದ ಧಾನ್ಯಗಳ ಗಣಿತ ವಾಗಲಿ; ತುಪ್ಪ, ಎಣ್ಣೆ, ಬೆಣ್ಣೆ, ಬಟ್ಟೆಬರೆಗಳ ಲೆಕ್ಕವಾಗಲಿ, ಭೂಮಿ ಸೀಮೆಯ ಅಳತೆಯ ಲೆಕ್ಕವಾಗಲಿ ಈ ಯಾವ ಪದಾರ್ಥಗಳ ಗಣಿತವಾದರೂ ಅದರ ಮೂಲ ಸಿದ್ಧಾಂತವು ಆಯ, ವ್ಯಯ, ಅವಶೇಷ ಇದೇಯಾಗಿದೆ. ಪದಾರ್ಥಗಳಲ್ಲಿ, ತೂಕದ ವಸ್ತುಗಳಲ್ಲಿ ಮತ್ತು ಭಾಷೆಗಳಲ್ಲಿ ವಿವಿಧತೆಯಾಗಿದೆ ಯೆಂದು ಗಣಿತ ಸಿದ್ಧಾಂತದ ಉತ್ತರದಲ್ಲಿ ಭಿನ್ನತೆಯು ಇಲ್ಲದಿರುವಂತೆ ಸರ್ವ ಮಾನವರಲ್ಲಿ ಧರ್ಮವು ಒಂದೇ ಒಂದಾಗಿರುವದು.

ಪಶು–ಪಕ್ಷಿ ಪಾಲನೆ ಅಹಿಂಸೆ, ಮನುಷ್ಯ ಪಾಲನೆ ಅಹಿಂಸೆ, ರಾಷ್ಟ್ರ ಪಾಲನೆ ಅಹಿಂಸೆ, ಹೀಗೆ ಒಂದೇ ಅಹಿಂಸೆಯು ನಾನಾವಿಧವಾಗಿ ತೋರಹತ್ತಿದೆ. ಅಹಿಂಸಾ ನಿಯಮವನ್ನು ಪಾಲನೆ ಮಾಡು. ಮಾಡದಿದ್ದಲ್ಲಿ ಧರ್ಮಬಾಹ್ಯನಾಗುವಿ.

ಮಾತೃ–ಪಿತೃಗಳಲ್ಲಿ ಸತ್ಯ, ಬಂಧು–ಭಗಿನಿಯರಲ್ಲಿ ಸತ್ಯ, ಸ್ವಾಮಿ ಸೇವಕರಲ್ಲಿ ಸತ್ಯ ರಾಜಾ ಪ್ರಜರಲ್ಲಿ ಸತ್ಯ ಭಾಷಣ ಹೀಗೆ ಒಂದೇ ಸತ್ಯ-

ವು ನಾನಾ ವಿಧವಾಗಿ ತೋರಹತ್ತಿದೆ. ಸತ್ಯ ನಿಯಮವನ್ನು ಪಾಲನೆ ಮಾಡು, ಮರೆಯಬೇಡ. ಮರೆತರೆ ಧರ್ಮ ಬಾಹ್ಯನಾಗುವಿ.

ಮಾತೃ-ಪಿತೃಗಳಲ್ಲಿ ಅಸ್ತೇಯ (ಕಳವು ಮಾಡದಿರುವದು) ಪಾಲನೆ, ಗುರುಗಳಲ್ಲಿ ಅಸ್ತೇಯ ಪಾಲನೆ, ರಾಷ್ಟ್ರ ಸಂಪತ್ತಿಯಲ್ಲಿ ಅಸ್ತೇಯಪಾಲನೆ, ಬಂಧು-ಬಾಂಧವರ ಸಂಪತ್ತಿಯಲ್ಲಿ ಅಸ್ತೇಯ ಪಾಲನೆ, ಹೀಗೆ ಒಂ ದೇ ಅಸ್ತೇಯುವು ಅನೇಕ ವಿಧವಾಗಿದೆ. ಅಸ್ತೇಯ ನಿಯಮವನ್ನು ಮರೆಯಬೇಡ ಬಿಡಬೇಡ ಬಿಟ್ಟರೆ ಧರ್ಮ ಬಾಹ್ಯನಾಗುವಿ.

ಪರ ಸ್ತ್ರೀ-ಯರಲ್ಲಿ ಬ್ರಹ್ಮಚರ್ಯ, ಸದವೆಯರಲ್ಲಿ ಬ್ರಹ್ಮಚರ್ಯ, ವಿಧವೆಯರಲ್ಲಿ ಬ್ರಹ್ಮಚರ್ಯ, ಭಗಿನಿಯರಲ್ಲಿ ಬ್ರಹ್ಮಚರ್ಯ, ಸ್ವ ಸ್ತ್ರೀಯಲ್ಲಿ ನಿಯಮಿತ ವಿಷಯ ಸೇವನೆಯ ಬ್ರಹ್ಮಚರ್ಯ, ರಾಷ್ಟ್ರ ಕರ್ಮಚಾರಿಣಿ ಸ್ತ್ರೀಯರಲ್ಲಿ ಬ್ರಹ್ಮಚರ್ಯ, ಸೃಷ್ಟಿಯ ಯಾವತ್ತು ಸ್ತ್ರೀಯರಲ್ಲಿ ನಿನ್ನ ಮಾತೃವತ್ ಪರಿಪಾಲಿಸುವ ನೈಷ್ಠಿಕ ಬ್ರಹ್ಮಚರ್ಯ ಹೀಗೆ ಒಂದೇ ಬ್ರಹ್ಮಚರ್ಯವು ಅನೇಕ ವಿಧವಾಗಿದೆ. ಬ್ರಹ್ಮಚರ್ಯ ನಿಯಮವನ್ನು ಬಿಡಬೇಡ ಬಿಟ್ಟರೆ ಧರ್ಮ ಬಾಹ್ಯನಾಗಿ ಪತಿತನಾಗುವಿ.

ಪಶು ಪಕ್ಷಿಗಳಲ್ಲಿ ದಯಾ, ಅನಾಥ ಮಕ್ಕಳಲ್ಲಿ ದಯಾ, ಕುರುಡ, ಕುಂಟ, ಮೂಕರಲ್ಲಿ ದಯಾ, ಅಬಲೆಯರಲ್ಲಿ ದಯಾ, ರೋಗಿಗಳಲ್ಲಿ ದಯಾ, ಹೀಗೆ ಒಂದೇ ದಯಾ ಭಾವವು ಅನೇಕ ವಿಧವಾಗಿ ತೋರಹತ್ತಿದೆ. ಈ ದಯಾ ನಿಯಮವನ್ನು ಬಿಡಬೇಡ. ಬಿಟ್ಟರೆ ಧರ್ಮ ಬಾಹ್ಯನಾಗುವಿ.

ಮಕ್ಕಳ ಅಪರಾಧಕ್ಕೆ ಕ್ಷಮೆ, ಸೇವಕರ ಅಪರಾಧಕ್ಕೆ ಕ್ಷಮೆ, ಅಜ್ಞಾನಿ ಜನಗಳ ಅಪರಾಧಕ್ಕೆ ಕ್ಷಮೆ, ಮಿತ್ರ ಅಪರಾಧಕ್ಕೆ ಕ್ಷಮೆ, ಪತ್ನಿ ಅಪರಾಧಕ್ಕೆ ಕ್ಷಮೆ, ಬಂಧು ಬಾಂಧವರ ಅಪರಾಧಕ್ಕೆ ಕ್ಷಮೆ. ಹೀಗೆ ಒಂದೇ

ಕ್ಷಮೆಯು ಕಾರ್ಯ ಗುಣವಾಗಿ ನಾನಾವಿಧವಾಗಿದೆ. ಕ್ಷಮಾ ನಿಯಮವನ್ನು ಬಿಡಬೇಡ. ಬಿಟ್ಟರೆ ಧರ್ಮ ಬಾಹ್ಯನಾಗುವಿ.

ರಾಷ್ಟ್ರ ಸೇವೆಯಲ್ಲಿ ದಾನ, ಗುರುಸೇವೆಯಲ್ಲಿ ದಾನ, ಕುಲದೇವತೆ, ರಾಷ್ಟ್ರ ದೇವತೆಯಲ್ಲಿ ದಾನ, ಅತಿಥಿ ಸೇವೆಗೆ ದಾನ, ಯಜ್ಞ ಪೂಜಾನುಷ್ಠಾನ ಸತ್ ಕರ್ಮಗಳಲ್ಲಿ ದಾನ, ಅಶ್ವದಾನ, ಗೋದಾನ, ಭೂದಾನ, ಅನ್ನದಾನ, ವಸ್ತ್ರದಾನ, ಸುವರ್ಣದಾನ, ಹೀಗೆ ಒಂದೇ ದಾನವು ನಾನಾ ವಿಧವಾಗಿದೆ. ಈ ದಾನ ನಿಯಮವನ್ನು ಬಿಡಬೇಡ. ಬಿಟ್ಟರೆ ಧರ್ಮ ಬಾಹ್ಯನಾಗುವಿ.

ರಾಷ್ಟ್ರ ಧ್ವಜ ಪೂಜೆ, ಹೋಮ ಹವನ ಪೂಜೆ ಬ್ರಹ್ಮ, ವಿಷ್ಣು, ರುದ್ರ, ಗಣಪತಿ, ಸರಸ್ವತಿ, ಲಕ್ಷ್ಮೀ, ಅಂಬಿಕಾ ಮೊದಲಾದ ದೇವತಾ ಮೂರ್ತಿ ಪೂಜೆ, ಗುರು ಪೂಜೆ, ಸಾಧು ಸಜ್ಜನರ ಪೂಜೆ, ತಂದೆ–ತಾಯಿ-ಪೂಜೆ, (ಲಿಂಗ) ಬ್ರಹ್ಮೋಪಾಸನೆಯ ಪೂಜೆ, ಹೀಗೆ ನಿನಗಿಷ್ಟವಾದ ಯಾವ ದೇವರ ಪೂಜೆಯನ್ನಾದರೂ ಮಾಡು. ಒಂದೇ ಪೂಜೆಯು ಅನೇಕ ವಿಧವಾಗಿ ತೋರಹತ್ತಿದೆ. ಪೂಜಾ ವಿಧಾನವು ಮರೆಯಬೇಡ. ಬಿಡಬೇಡ, ಬಿಟ್ಟರೆ ಧರ್ಮ ಬಾಹ್ಯನಾಗುವಿ.

ರಾಷ್ಟ್ರ ಧ್ವಜಸ್ತವನ, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಗುರು, ಮೊದಲಾದವರ ಭಜನ, ಕೀರ್ತನ, ಕವಚ, ಸೂಕ್ತ, ಅಸ್ತ್ರ, ಮುಂತಾದ ಜಪಗಳೂ; ವಿಷ್ಣು ದ್ವಾದಶಾಕ್ಷರೀ ಜಪ, ನಾರಾಯಣಷ್ಟಾಕ್ಷರೀ ಜಪ, ಶಕ್ತಿ ತ್ರಯೋದಶಾಕ್ಷರೀ ಜಪ, ಶಿವ ಪಂಚಾಕ್ಷರ ಜಪ, ಹೀಗೆ ಒಂದೇ ಜಪವು ಉಪಾಸನಾ ಭೇದ ಮೂಲಕ ಅನೇಕ ವಿಧವಾಗಿ ತೋರಹತ್ತಿದೆ. ಜಪ ನಿಯಮವನ್ನು ಬಿಡಬೇಡ. ಬಿಟ್ಟರೆ ಧರ್ಮ ಬಾಹ್ಯನಾಗುವಿ.

ರಾಷ್ಟ್ರ ದೇವತಾಧ್ಯಾನ, ಮಾತೃಧ್ಯಾನ, ಪಿತೃಧ್ಯಾನ, ಗುರು ಧ್ಯಾನ, ಶಿವಧ್ಯಾನ, ಇಷ್ಟ ಕುಲದೇವತಾ ಧ್ಯಾನ ಇವು ಸಗುಣಧ್ಯಾನಗಳಾ-

ಗಿವೆ. ಆತ್ಮ, ಪರಮಾತ್ಮವೆಂಬ ತತ್ವಾನುಸಂಧಾನವಿದು; ನಿರ್ಗುಣ ಧ್ಯಾನವಾಗಿದೆ. ಹೀಗೆ ಒಂದೇ ಧ್ಯಾನವು ಅನೇಕ ವಿಧವಾಗಿದೆ. ಧ್ಯಾನ ನಿಯಮವನ್ನು ಬಿಡಬೇಡ. ಮರೆಯಬೇಡ. ಮರೆತರೆ ಧರ್ಮ ಬಾಹ್ಯ ನಾಗುವಿ.

ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯಾ, ಕ್ಷಮಾ, ದಾನ, ಪೂಜಾ, ಜಪ, ಮತ್ತು ಧ್ಯಾನ ಇವುಗಳು ಸಾಧನೆಯ ಮೂಲಕ ವಿವಿಧವಾಗಿ ತೋರಿದರೂ ಮೂಲ ಧರ್ಮ ತತ್ವದಲ್ಲಿ ಭಿನ್ನತೆಯಾಗಿರುವದಿಲ್ಲ.

ಶೈವ, ವೈಷ್ಣವ ಸೌರ, ಶಾಕ್ತ, ಗಾಣಪತ್ಯ, ಜೈನ, ಬೌದ್ಧ, ಚಾರ್ವಾಕ, ಇಸ್ಲಾಮ್, ಕ್ರೈಸ್ತ, ಜೂ ಪಾರ್ಸಿ, ಯಹುದೀ ಮೊದಲಾದ ಅನೇಕ ಮತಗಳೂ; ವಾರಕರಿ ಪಂಥ, ಕಬೀರ ಪಂಥ, ನಾನಕ ಪಂಥ, ಮಹಾನುಭವ ಪಂಥ, ಅನೇಕ ಪಂಥಗಳೂ, ಬ್ರಹ್ಮೋ ಸಮಾಜ, ಚೈತನ್ಯ-ಸಮಾಜ, ಸತ್ಯ ಶೋಧಕ ಸಮಾಜ ಮೊದಲಾದ ಸಮಾಜಗಳು; ಹೀಗೆ ಇಡೀ ಜಗತ್ತಿನ ಅನೇಕ ಮತ, ಪಂಥ, ಸಮಾಜಗಳು ದೇಶ, ಕಾಲ, ಪರಸ್ಥಿತಿಗನುಸಾರವಾಗಿ ಮಾನವ ಧರ್ಮದ ಮೂಲ ತತ್ವಗಳೇ ಭಿನ್ನ, ಭಿನ್ನ ಸ್ವರೂಪದಲ್ಲಿ, ಭಿನ್ನಾವಸ್ಥೆಯಲ್ಲಿ, ಭಿನ್ನ ಭಾಷೆಗಳಲ್ಲಿ ಹೇಳಿದರು. ಕೆಲವು ಕಾಲಾಂತರದಲ್ಲಿ ಈ ಮತ, ಪಂಥ, ಸಮಾಜದ ಕಲ್ಪನೆಯಿಂದ ಪರಸ್ಪರ ಅನುಯಾಯಿಗಳಲ್ಲಿ ಅಜ್ಞಾನ ಮೂಲಕ ದ್ವೇಷಾಸೂಯಗಳು ನಿರ್ಮಿತವಾಗಿವೆ. ಧರ್ಮದ ಹೆಸರಿನಲ್ಲಿ ಹಿಂಸಾ, ಕೊಲೆ, ರಕ್ತ ಪಾತವಾಗಿ, ಮಾನವ ಕುಲವು ಮಡಿದು ಖಂಡ ಖಂಡವಾಗಿ ತೋರುತ್ತಿದೆ.

ಮತ ಪಂಥಗಳ ಅಭಿವೃದ್ಧಿಯೆಂದರೆ. ಪ್ರತಿಯೊಂದು ಮತಾನುಯಾಯಿಗಳು ಇನ್ನುಳಿದ ಮತದಲ್ಲಿಯ ಜನರನ್ನು ಪ್ರಾಯಶ್ಚಿತ್ತ ಶುದ್ಧಿ ಸಂಸ್ಕಾರ ಮೂಲಕ ಮತಾಂತರಗೊಳಿಸಿ, ತಮ್ಮ ಜನರ ಸಂಖ್ಯೆಯನ್ನು ಹೆಚ್ಚಿಸುವದು ಇದಕ್ಕೂ ಪೈಶಾಚಿಕ ಕೃತಿಯೆಂದರೆ ಸ್ತ್ರೀಯರನ್ನು ಬಲತ್ಕಾರ

ಪೂರ್ವಕ ಅಪಹಾರ ಮಾಡಿ ತಮ್ಮ ಮತದಲ್ಲಿ ಸೇರಿಸಿಕೊಳ್ಳುವದು. ಮಾಂಸ, ಮದ್ಯ, ಸುರಾ ಮತ್ತು ವ್ಯಭಿಚಾರ ಮೊದಲಾದ ದುಷ್ಟ ಪ್ರಮಾದಗಳಿಂದ ಮನ ಸೆಳೆದು ಮತಾಂತರಗೊಳಿಸುವದು, ಕೆಲವು ಮತಿಯರು ವಿದ್ಯಾ ಹೀನರಿಗೆ ವಿದ್ಯ, ಧನ ಹೀನರಿಗೆ ಧನ, ಅನ್ನ, ಹೀನರಿಗೆ ಅನ್ನ ವಸ್ತ್ರ ಹೀನರಿಗೆ ವಸ್ತ್ರ ಕೊಟ್ಟು ಪ್ರೇಮ ಸಂಪಾದನೆ ಮಾಡಿ ಕೊನೆಗೆ ಅವರಿಗೆ ತಮ್ಮ ಮತ ಸಂಸ್ಕಾರ ಮೂಲಕ ಮತಾಂತರಗೊಳಿಸಿ ತಮ್ಮ ಜನರ ಅಭಿವೃದ್ಧಿಗೊಳಿಸುವರು. ಮತ್ತೆ ಆ ಸ್ತ್ರೀ ಪುರುಷರೊಡನೆ ಲಗ್ನವಾಗುವರು. ಇದು ಕೇವಲ ಧರ್ಮದ ಅಜ್ಞಾನತೆಯ ಭ್ರಮೆಯೇ, ಹೊರತು ಬೇರೊಂದಿಲ್ಲ. ಇಂತಹ ಪೈಶಾಚಿಕ ಕೃತಿಗಳ ಚಿರಸ್ಮರಣೆಗಾಗಿ ಇತಿಹಾಸವು ಇಂದಿಗೂ ಅಚ್ಚಳಿಯದೆ ಸೂರ್ಯ ಚಂದ್ರರಂತೆ ಸಾಕ್ಷೀಭೂತವಾಗಿದೆ. ಇವೆಲ್ಲ ಧರ್ಮದ ಹೆಸರಿನಲ್ಲಿ ಭಯಂಕರವಾದ ಅನಾಹುತಗಳು ಸಂಭವಿಸಿ ಇಂತಹ ಧರ್ಮವು ನಮಗೆ ಬೇಡವೆಂದು ಧರ್ಮದ ವಿಷಯದಲ್ಲಿ ಕೆಲವರಿಗೆ ಅನಾದರವು, ಅಪ್ರೇಮವು ಪ್ರಾಪ್ತವಾಗಿ ತಿರಸ್ಕೃತಭಾವವಾಗಿದೆ. ಧರ್ಮವು ನಮಗೆ ಬೇಡವೇ ಬೇಡ. ಇದು ಮನುಷ್ಯರ ಪ್ರೇಮಾನಂದ ಸುಖ ಶಾಂತಿಯ ಪೂರ್ತಿಗೆ ಕುಂದು ಕೊರತೆ ತರುವದಾಗಿರುತ್ತದೆ. ಇಂತಹ ಧರ್ಮವೇ ಬೇಡವೆಂದು ಸರ್ವ ಸಾಮಾನ್ಯವಾಗಿ ಬಹು ಜನರ ಭಾವನೆಯಾಗಿದೆ.

ಸಾರಾಂಶ: ಇವೆಲ್ಲ ಮತ ಪಂಥಗಳು ಇತ್ತೀಚಿನ ದೇಶ, ಕಾಲ ಭೇದಗಳಿಂದ ನಿರ್ಮಿತವಾದವುಗಳು. ಇತಿಹಾಸದ ಸಮಾಲೋಚನೆಯಿಂದ ನಾಲ್ಕು ಸಾವಿರದ ತತ್ಪೂರ್ವದಲ್ಲಿ ಯಾವ ಮತ, ಪಂಥ, ಸಮಾಜಗಳ ಅಸ್ತಿತ್ವವು ಇದ್ದಿಲ್ಲವೆಂದು ನಿರ್ಣಯವಾಗುತ್ತದೆ.

ಧರ್ಮದ ಮೂಲ ತತ್ವಗಳು ಯಾರೂ ನಿರ್ಮಿಸದೆ ಜಗತ್ತಿನಲ್ಲಿ ಅವು ನೈಸರ್ಗಿಕ, ಸ್ವಾಭಾವಿಕವಾಗಿವೆ. ಆ ಸ್ವಾಭಾವಿಕ ಧರ್ಮದ ನಿಯಮಗಳಿಗೆ ಜ್ಞಾನ ಕ್ರಿಯಾ ಸ್ವರೂಪದಲ್ಲಿ ಪ್ರತ್ಯಕ್ಷ ಅನುಭವಗೊಳ್ಳುವದಕ್ಕೆ ಧರ್ಮವೆನ್ನುತ್ತಾರೆ.

ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ, ಶ್ರೀ ಜಗದ್ಗುರು ದಾರುಕ ಶಿವಾಚಾರ್ಯರು ಸಾನಂದ ಮಹರ್ಷಿಗಳಿಗೆ, ಶ್ರೀ ಜಗದ್ಗುರು ಧೇನುಕರ್ಣ ಶಿವಾಚಾರ್ಯರ ದಧೀಚಿ ಮಹರ್ಷಿಗಳಿಗೆ, ಶ್ರೀ ಜಗದ್ಗುರು ವಿಶ್ವಕರ್ಣ ಶಿವಾಚಾರ್ಯರು ದುರ್ವಾಸ ಮಹರ್ಷಿಗಳಿಗೆ, ಶ್ರೀ ಜಗದ್ಗುರು ಘಂಟಾಕರ್ಣ ಶಿವಾಚಾರ್ಯರು ವ್ಯಾಸ ಮಹರ್ಷಿಗಳಿಗೆ ಮಾನವ ಧರ್ಮ ತತ್ವವನ್ನು ಉಪದೇಶಿಸಿ "ಧರ್ಮಾಚಾರ" ವನ್ನು ಸ್ಥಾಪನೆಗೊಳಿಸಿದರು. ಇವರು ಮಾನವ ಕುಲದ ಗುರುಗಳಾಗಿರುತ್ತಾರೆ. ಮಾನವ ಧರ್ಮದ ಆಚಾರ್ಯರಾಗಿರುತ್ತಾರೆ. ಮಾನವ ಧರ್ಮವು ಸರ್ವ ಸಮನ್ವಯವಾಗಿ ಜಗತ್ತಿಗೆ ಸುಖ-ಶಾಂತಿಯನ್ನು ಕೊಡುವದಾಗಿದೆ.

ಕೆಲವು ಧರ್ಮಾಂಧ ಜನಗಳು ಮಾನವ ನಿರ್ಮಿತ ಮತ, ಪಂಥ, ಸಮಾಜಗಳಿಗೆ ಧರ್ಮವೆಂದು ಭಾವಿಸಿ, ಧರ್ಮಕ್ಕೂ, ರಾಷ್ಟ್ರಕ್ಕೂ ಯಾವ ವಿಧವಾದ ಸಂಬಂಧವು ಇರುವದಿಲ್ಲವೆಂದು ಘೋಷಿಸುತ್ತಾರೆ. ರಾಷ್ಟ್ರ ಮತ್ತು ಧರ್ಮ ಇವೆರಡು ಪರಸ್ಪರ ಸಾಪೇಕ್ಷಕವಾಗಿದ್ದು ಮಾನವ ಜೀವನದ ಪೂರ್ಣತ್ವ ಪ್ರಾಪ್ತಿಗಾಗಿ ಪೂರ್ವೋತ್ತರ ಭಾಗವಾಗಿವೆ. ಧರ್ಮದ ವ್ಯತಿರಿಕ್ತ ರಾಷ್ಟ್ರವು ಒಂದೇಯಾಗಿ ಪೂರ್ಣಾಂಶ ಜೀವಿಸಲಾರದು.

ರಾಷ್ಟ್ರದ ಯಾವತ್ತು ಯೋಗಕ್ಷೇಮವು ವಿಶೇಷತಃ ಧರ್ಮದ ಅಂಗಗಳಾದ ಪೂಜಾ, ಜಪ, ಧ್ಯಾನ ಈ ಮೂರು ವಿಧಾನಗಳಲ್ಲಿಯೇ ಚರಿಸುತ್ತದೆ.

ರಾಷ್ಟ್ರಪತಿಯು ಸಕಲ ಪ್ರಜರಿಗೆ ಪೂಜ್ಯನಾಗಿ ಪ್ರಜರು ಅವನಿಗೆ ಪೂಜಕ, ಸೇವಕರಾಗಿರುತ್ತಾರೆ. ರಾಷ್ಟ್ರಪತಿಯ ಅಂಗವಾದ ಪುಲೀಸ ಕರ್ಮಚಾರಿಯ ಮೊದಲುಗೊಂಡು ಕ್ರಮೇಣ ಉತ್ತರೋತ್ತರ ಸಕಲ ಅಧಿಕಾರಿಗಳು ಪರಸ್ಪರ ಆದರ ಮತ್ತು ಪೂಜ್ಯ ಭಾವದಿಂದ ಆಚರಿಸುತ್ತ; ಕೊನೆಗೆ ರಾಷ್ಟ್ರಪತಿಯು ಸರ್ವ ಶ್ರೇಷ್ಠ ಪೂಜ್ಯನೆಂದು ಭಾವಿಸುತ್ತಾರೆ. ರಾಷ್ಟ್ರ ಪತಿಯೂ

ಕೂಡ ತಾನು ಪೂಜ್ಯನೆಂದು ಭಾವಿಸಿಕೊಳ್ಳದೆ, ರಾಷ್ಟ್ರ ಬೋಧಕವಾದ, ರಾಷ್ಟ್ರ ಪ್ರತೀಕವಾದ ರಾಷ್ಟ್ರ ಧ್ವಜವು ಸರ್ವಶ್ರೇಷ್ಠವೆಂದು ಆದರ ಸನ್ಮಾನಪೂರ್ವಕ ಪೂಜ್ಯ ಭಾವದಲ್ಲಿ ವರ್ತಿಸುತ್ತಾನೆ. ರಾಷ್ಟ್ರಪತಿಯು ಮೊದಲುಗೊಂಡು ಸಕಲ ಪ್ರಜರು "ರಾಷ್ಟ್ರ ಧ್ವಜ"ಕ್ಕೆ ರಾಷ್ಟ್ರ ದೇವತೆಯೆಂದು ರಾಷ್ಟ್ರ ಭಕ್ತಿಯಿಂದ ಪೂಜ್ಯ-ಪೂಜಕ ಭಾವದಲ್ಲಿ ವರ್ತಿಸುತ್ತಾರೆ. ಆ ಧ್ವಜದ ಗೌರವವೇ ರಾಷ್ಟ್ರದ ಗೌರವ. ಧ್ವಜ ಪೂಜೆಯೇ ರಾಷ್ಟ್ರದ ಪೂಜೆ. ಧ್ವಜದ ಸನ್ಮಾನವೇ ರಾಷ್ಟ್ರದ ಸನ್ಮಾನವೆಂದು ತಿಳಿಯುತ್ತಾರೆ. ಆ ಧ್ವಜಕ್ಕೆ ಭಸ್ಮ, ಗಂಧ, ಕುಂಕುಮಾಕ್ಷತೆ, ಪತ್ರ ಪುಷ್ಪಾದಿ ಮಾಲೆಗಳಿಂದ ಅಲಂಕೃತಗೊಳಿಸಿ, ಸುಗಂಧ ಧೂಪವು ನೀಡಿ, ಘೃತಕರ್ಪೂರಾದಿ ದೀಪಾರತಿಗಳು ಬೆಳಗಿ ಬಹಿರ್ ಕ್ರಿಯಗಳಾದ ಪೂಜಾ ವಿಧಾನವು ಮುಗಿಯುತ್ತಲೇ; ಆಸಕಲ ಪ್ರಜರು ತಮ್ಮ ವಾಣಿಯಿಂದ ರಾಷ್ಟ್ರ ಧ್ವಜದ ಸ್ತುತಿ, ಕೀರ್ತಿಯ ಗುಣಗಾನದ ಜಪ ಮಾಡುತ್ತ ಕೊನೆಗೆ ಆ ಧ್ವಜದ ಜಯಘೋಷ ನಿನಾದದೊಡನೆ ವಾಣಿಯು ವಿರಾಮವಾಗುತ್ತದೆ. ಮತ್ತೆ ಕಾಯ, ಮನ, ಭಾವಗಳಿಂದ ಬಹಿರ್ ಸೃಷ್ಟಿಗೆ ಮರೆತು ರಾಷ್ಟ್ರ ಧ್ವಜದ ನಾಮ ರೂಪಗಳನ್ನು ಭಾವದಲ್ಲಿ ಅಳವಡಿಸುತ್ತ ಧ್ಯಾನಾಸಕ್ತರಾಗುತ್ತಾರೆ. ಸಕಲ ಪ್ರಜರು ರಾಷ್ಟ್ರ ಧ್ವಜದಲ್ಲಿ ಭಕ್ತಿ ಧ್ಯಾನಾಸಕ್ತರಾಗಿ ಆಸ್ತಿಕ್ಯ ಭಾವದಲ್ಲಿ ಪ್ರೇಮ ಭಾವದಲ್ಲಿ ವರ್ತಿಸುತ್ತಾರೆ.

ಮಾತ್ರ, ಇವರ ಪ್ರೇಮವು ಆ ರಾಷ್ಟ್ರ ಧ್ವಜವು ಅರಿಯುವದಿಲ್ಲ. ಕಮಲ ಪತ್ರವು ಸದಾ ಜಲದಲ್ಲಿದ್ದರೂ ಜಲದ ಪರಿಚಯವು ಅದಕ್ಕಿಲ್ಲದಿರುವಂತೆ, ರಾಷ್ಟ್ರ ಧ್ವಜವು ಪ್ರಜರ ನಾಮ ರೂಪಾತ್ಮಕ ಪ್ರೇಮವನ್ನು ಅರಿಯದಾದರೂ ರಾಷ್ಟ್ರ ಭಕ್ತರ ನಿರತಿಶಯ ಪ್ರೇಮದ ವಿರಾಮಕ್ಕೆ ಅದು ಮಹದಾಶ್ರಯ ಸ್ಥಾನವಾಗಿದೆ.

ರಾಷ್ಟ್ರ ಪತಿಯು ಪ್ರಜರ ಭಕ್ತಿ ಪ್ರೇಮವನ್ನು ಅರಿತು ಆನಂದಿಸುತ್ತಿರುವದರಿಂದ ಪ್ರಜರು ಅವನಲ್ಲಿ ತೋರುವ ಪೂಜಾ (ಆದರ), ಜಪ (ಸ್ತುತಿ), ಧ್ಯಾನ ಇವು ಸಾಕಾರವಾಗಿವೆ.

ರಾಷ್ಟ್ರ ಧ್ವಜವು ಪ್ರಜರ ಭಕ್ತಿ, ಪ್ರೇಮುವನ್ನು ಅರಿಯು-ದಾದರಿಂದ ಪ್ರಜರ ನಿರತಿಶಯು ಪ್ರೇಮ ಭಕ್ತಿಯುು ರಾಷ್ಟ್ರ ಧ್ವಜ-ದಲ್ಲಿ ಸಕಲ ರಾಷ್ಟ್ರದಪರವಾಗಿಯೇ ಉಪಯೋಗವಾಗುತ್ತಿದೆ. ರಾಷ್ಟ್ರ-ವೇದರೆ ವಿಶಿಷ್ಟ ನಾಮ ರೂಪಗಳು ಗೋಚರವಾಗದೆ ವ್ಯಾಪಕ ಸ್ವ-ರೂಪದಲ್ಲಿ ಪ್ರೇಮ ಭಕ್ತಿಯುು ವಿನಿಯೋಗ ವಾಗುವ ಮೂಲಕ; ಧ್ವಜ ಪೂಜೆಯೆಂದರೆ ನಾಮ ರೂಪಕ್ಕೆ ಅತೀತವಾದ ರಾಷ್ಟ್ರದ ಸೂ-ಕ್ಷ್ಮ ಮಹತ್ ಶಕ್ತಿಯ ಪೂಜಾ, ಜಪ ಧ್ಯಾನ ವಾಗಿದೆ.

ಒಂದು ರಾಷ್ಟ್ರದಲ್ಲಿ ಅನೇಕ ರಾಷ್ಟ್ರ ಪತಿಗಳು ಕಾಲಚಕ್ರದಲ್ಲಿ ಚರಿಸುತ್ತಾರೆ. ಮಾತ್ರ ರಾಷ್ಟ್ರ ಸತ್ತೆಯು ಅಖಂಡವಾಗಿರುತ್ತದೆ. ಅದು ನಾಶ-ಹೊಂದುವದಿಲ್ಲ. ಯಾವ ವಿಧವಾದ ವಿಧಾನವಾದರೂ ಅದರ ಅಸ್ತಿತ್ವವು ಸದೈವ ಇದ್ದೇ ಇರುತ್ತದೆ. ಅದು ಬಹಿರ್ ಸೃಷ್ಟಿಗೆ ತೋರದಾದರೂ ಸಕಲ ಪ್ರಜರು ನಿರತಿಶಯ ಪ್ರೇವ ದಲ್ಲಿ ಅದಕ್ಕೆ ಅರಿಯುತ್ತಾರೆ. ಪ್ರಜರು ಆ ಸೂಕ್ಷ್ಮ ರಾಷ್ಟ್ರ ಶಕ್ತಿಯನ್ನು, ರಾಷ್ಟ್ರ ಧ್ವಜದ ಪರವಾಗಿ ನಿರತಿಶಯ ಪ್ರೇಮ ಭಕ್ತಿಯಲ್ಲಿ ಪರಿವೇಷ್ಟಿತ ರಾಗಿರುತ್ತಾರೆ.

ಸಾರಾಂಶ: ಪೂಜಾ, ಜಪ, ಧ್ಯಾನ ಈ ಮೂರು ನಿಯಮಗಳಲ್ಲಿಯೇ ರಾಷ್ಟ್ರದ ಕರ್ಮಯೋಗವು ಕ್ರಮವಾಗಿ ಸಾಗುತ್ತಿದೆ. ರಾಷ್ಟ್ರ ಧ್ವಜದಲ್ಲಿ ಪ್ರಜರ ನಿರತಿಶಯ ಪ್ರೇಮದ ಭಾವ ಭಕ್ತಿಯು ಕಡಿಮೆಯಾಗಿ ಪ್ರಜರು ನಾಸ್ತಿಕರಾಗಲು; ರಾಷ್ಟ್ರದಲ್ಲಿ ಅಲ್ಪಕಾಲ ಅರಾಜಕತೆಯು ಪ್ರಾಪ್ತವಾಗುತ್ತದೆ ಕರ್ಮಯೋಗ ಪ್ರಪಂಚದ ಜೀವಿಗಳೆಲ್ಲ ದುಃಖಾಗ್ನಿಯಿಂದ ತಪ್ತರಾಗಿ ಸು-ಖ-ಶಾಂತಿಯ ಅಭಾವ ಮೂಲಕ ಅವರ ಜೀವನ ನಿರ್ವಹಣವು ದುಸ್ತರ ವಾಗುತ್ತದೆ.

ರಾಷ್ಟ್ರದ ಕರ್ಮಯೋಗ ಪ್ರಪಂಚವು ಅದು ಕ್ರಮೇಣ ಸಾಗಬೇ-ಕಾದರೆ, ರಾಷ್ಟ್ರದಲ್ಲಿ, ರಾಷ್ಟ್ರ ಪತಿಯಲ್ಲಿ, ರಾಷ್ಟ್ರ ಧ್ವಜದಲ್ಲಿ ಸಕಲ ಪ್ರ-

ಜರು ನಿರತಿಶಯ ಪ್ರೇಮದ ಪೂಜಾ (ಆದರ), ಜಪ (ಸ್ತುತಿ), ಧ್ಯಾನ (ಆಸಕ್ತಿ), ಈ ಮೂರು ವಿಧಾನಗಳಲ್ಲಿ ವರ್ತಿಸದ ವಿನಃ ರಾಷ್ಟ್ರದಲ್ಲಿ ಸುಖ-ಶಾಂತಿಯುಲಭಿಸುವದಿಲ್ಲ. ಆದರಿಂದ ರಾಷ್ಟ್ರವು ಸದಾ ಧರ್ಮಾಂಕಿತ ವಾಗಿಯೇ ಜೀವಿಸಿರುತ್ತದೆ.

ಮಾನವ ಜೀವನವು ಧರ್ಮಾಂಕಿತ ವಾಗಿದ್ದು ರಾಷ್ಟ್ರದ ಅಂಶೀ-ಭೂತ ಘಟಕವಾದರಿಂದ ಧರ್ಮ ಮತ್ತು ರಾಷ್ಟ್ರ ಇವೆರಡು ವಿಭಕ್ತವಾ-ದರೆ ಎರಡೂ ಅಪೂರ್ಣವಾಗುತ್ತವೆ. ರಾಷ್ಟ್ರವು ಮತ, ಪಂಥ, ಸಮಾಜ-ಗಳ ನಿರಪೇಕ್ಷಕ ವಾಗಿರುವದು.

ನಮ್ಮೀ ಭಾರತ ರಾಷ್ಟ್ರದಲ್ಲಿ ವಾಸಿಸಿರುವ ವಿಜ್ಞಾನವಾದಿಗಳು ಭೌತಿಕ ವಿಜ್ಞಾನದ ಸಹಾಯ ಮೂಲಕ ಭಾರತ ಭೂಮಿಯು ಅತ್ಯಂತ ಸುಖ ಸಂಪನ್ನ ರಾಷ್ಟ್ರವಾಗಲೆಂಬ ಸದುದ್ದೇಶಕ್ಕಾಗಿ ಅವಿಶ್ರಾಂತ ಪ್ರಯತ್ನಿ-ಸುತ್ತಿರುವರು. ಆದರೆ ಆ ಮಾರ್ಗವು ಸುರಾಜ್ಯ ಮತ್ತು ಸುಶಾಸನದ ನಿರ್ಮಿತಿಯ ಉದ್ದೇಶದಲ್ಲಿ ಅಪೂರ್ಣವಾಗಿದ್ದು ಭಾರತ ಭೂಮಿಯ ನೈಸ-ರ್ಗಿಕ ಪ್ರವೃತ್ತಿಗೂ ವಿಸಂಗತವಾಗಿದೆ. ನಿಜವಾದ ಸುಧಾರಣೆ ಎಂದರೆ ಜಡ-ವಾದಾತ್ಮಕ ವಾಗಿರದೆ ಚೈತನ್ಯವಾದಾತ್ಮಕ ವಾಗಿರುತ್ತದೆ.

**ಸರ್ವೇಷು ಗಾತ್ರೇಷು ಸಿರಃಪ್ರಧಾನಂ । ವೆಂಬಂತೆ,**

ಮನುಷ್ಯನ ಶರೀರದ ಎಲ್ಲ ಅವಯವಗಳಲ್ಲಿ ಸಿರೋಭಾಗವು ಜ್ಞಾನ ಶಕ್ತಿಯ ವಿಶೇಷ ಕೇಂದ್ರವಾದರಿಂದ ಅದಕ್ಕೆ ಅಗ್ರ ಸ್ಥಾನವೆಂದು ಮನ್ನಿಸ-ಲಾಗಿದೆ. ಸಿರಸ್ಸಿನಲ್ಲಿ ಮನನಾತ್ಮಕ ಶಕ್ತಿಯು ವಿಶೇಷವಾದರಿಂದ ಸಿರವು ಚೈತನ್ಯ ಭಾಗ ವಾಗಿದೆ. ಹಸ್ತ ಪಾದಾದಿ ಅವಯವಗಳಲ್ಲಿ; ಜ್ಞಾನ ಶಕ್ತಿ-ಯು ಸಾಮಾನ್ಯವಾದುದರಿಂದ ಅವುಗಳು ಸಿರಸ್ಸಿಗಿಂತಲೂ ಜಡವಾಗಿವೆ. ಸಿರಸ್ಸಿಗಿಂತಲೂ ಇನ್ನುಳಿದ ಅವಯವಗಳು ಬಲ ಶಾಲಿಯಾಗಿದ್ದರೂ ಸಿರ-ಸ್ಸಿನ ಜ್ಞಾನ ಶಕ್ತಿಯ ವಿನಃ ಸಂರಕ್ಷಣೆ ಮಾಡಿಕೊಳ್ಳುವ ಸಾಮರ್ಥ್ಯವು

ಅವುಗಳಿಗಿಲ್ಲದಿರುವಂತೆ ಈ ಜಗತ್ತಿಗೆ ಒಬ್ಬ ವಿರಾಟ್ ಪುರುಷನೆಂದು ಭಾವಿಸಲು ವಿಶ್ವರೂಪಿ ವಿರಾಟ್ ಪುರುಷನ ಸಿರರೂಪಿ ಅಗ್ರ ಭಾಗವು ಭಾರತ ದೇಶವಾಗಿರುತ್ತದೆ. ಮತ್ತು ಭಾರತ ದೇಶದಲ್ಲಿರುವ ಮೇರು ಮಣಿಯೆನಿಸಿದ ಹಿಮಾಲಯು ಪರ್ವತದ ಸಮವಾಗಿ ಅನ್ಯ ಯಾವ ದೇಶದಲ್ಲಿಯೂ ಇಷ್ಟು ಎತ್ತರ ಪ್ರದೇಶವುಳ್ಳ ಪರ್ವತ ಭಾಗವು ಇಲ್ಲವಾದರಿಂದ ಭಾರತ ರಾಷ್ಟ್ರಕ್ಕೆ ಸಿರೋ ಭಾಗದ ಉಪಮೆಯು ಅತಿಶಯೋಕ್ತಿ ಯೆನಿಸಲಾರದು.

ಸ್ವಾತಂತ್ರ್ಯ ಪ್ರಾಪ್ತಿಗಾಗಿ ಭಾರತ ರಾಷ್ಟ್ರದ ದೇಶ ಭಕ್ತರು ಜಡಭಾವಾತ್ಮಕರಾಗಿ ಹಿಂಸಾಮಯ ಯುದ್ಧ ಮೂಲಕ ರಕ್ತ ಪಾತ ಮಾಡದೆ, ಸತ್ಯ ಅಹಿಂಸಾತ್ಮಕ ಊರ್ಧ್ವಭಾವ ಭಕ್ತಿಯಲಿ ರಕ್ತದಾನ ಪ್ರಾಣದಾನ ಮಾಡಿರುವರು.

ಸಾರಾಂಶ: ಭಾರತ ರಾಷ್ಟ್ರದ ಸ್ವಾತಂತ್ರ್ಯ ಜನ್ಮವು ಚೈತನ್ಯ ವಾದದಲ್ಲಿ, ಬುದ್ಧಿವಾದದಲ್ಲಿ, ಧರ್ಮವಾದದಲ್ಲಿ ಆಗಿರುತ್ತದೆ. ಇದರಿಂದ ಭಾರತವು ಜಗತ್ತಿನ ಸಿರೋಭಾಗ, ಜ್ಞಾನಭಾಗವಾಗಿದೆಯೆಂದು ಸಿದ್ಧವಾಗುತ್ತದೆ. ಸಿರದ ನೈಸರ್ಗಿಕ ಗುಣ ಧರ್ಮವು ಜ್ಞಾನ ಶಕ್ತಿಯಿಂದ ಇಂದ್ರಿಯಗಳಿಗೆ ನಿಯಮನ ಗೊಳಿಸುವ ದಾಗಿರುವದರಿಂದ ಮನುಷ್ಯರ ಮಾನವತೆಯು ಉಜ್ವಲ ಗೊಳಿಸುವ ಧರ್ಮ ಶಿಕ್ಷಣ ಪ್ರಣಾಲಿಯು ವ್ಯವಹಾರದಲ್ಲಿ ತಂದು; ಅಖಿಲ ವಿಶ್ವದ ಎಲ್ಲ ರಾಷ್ಟ್ರಗಳಿಗೆ ಮಾನವತಾ ಸಂಪನ್ನವಾಗಿ ಮಾಡುವ ಮಹತ್ಕಾರ್ಯವು ಪರಮ ಪವಿತ್ರವಾದ ಈ ಭಾ-

ರತ ದೇಶದಾಗಿದೆ. ರಾಷ್ಟ್ರದಲ್ಲಿ ಸುರಾಜ್ಯ ಮತ್ತು ಶಾಂತಿ ಸ್ಥಾಪ-ನೆಗಾಗಿ ಮಾನವ ಧರ್ಮವು ಅತ್ಯಂತ ಅವಶ್ಯಕ ವೆಂಬುದು ಪರಮ ಸಿದ್ಧಾಂತವಾಗಿದೆ.

"ಯತೋ ಧರ್ಮ ಸ್ತತೋ ಜಯಃ"

ಎಲ್ಲಿ ಧರ್ಮವೋ ಅಲ್ಲಿಯೇ ಜಯವಿರುತ್ತದೆ.

"ಧರ್ಮೇ ಸರ್ವಂ ಪ್ರತಿಷ್ಠಿತಮ್"

ಎಲ್ಲವು ಧರ್ಮದಲ್ಲಿಯೇ ಸ್ಥಾಪಿತಗೊಂಡಿದೆ.

"ಧರ್ಮೋ ರಕ್ಷತಿ ರಕ್ಷಿತಃ"

ಧರ್ಮವನ್ನು ರಕ್ಷಿಸುವವನಿಗೆ ಅದು ರಕ್ಷಿಸುತ್ತದೆ.

"ಮಾನವ ಧರ್ಮಕ್ಕೆ ಜಯವಾಗಲಿ!"

"ಧರ್ಮದಿಂದಲೇ, ವಿಶ್ವಕ್ಕೆ ಶಾಂತಿ"!



# ಮಾನವ ಧರ್ಮದ ದಶ ನಿಯಮಗಳು.



ಅಹಿಂಸಾ = ಪರರ ಮನ ನೋಯಿಸಬೇಡ. ಅನ್ಯ ಪ್ರಾಣಿಗಳನ್ನು ಹಿಂಸಿಸಬೇಡ.

ಸತ್ಯ = ಅಸಹ್ಯ, ಅಪ್ರಿಯ, ಅಸತ್ಯ ಮಾತನಾಡದೇ ನಿಜವಾಗಿ ಮಾತಾಡು.

ಅಸ್ತೇಯ = ಪರರ ದ್ರವ್ಯ ಭೋಗ ವಸ್ತುಗಳನ್ನು ಕದಿಯಬೇಡ.

ಬ್ರಹ್ಮಚರ್ಯ = ಪರಸ್ತ್ರೀ ಪರಪುರುಷರನ್ನು ಪಾಪ ದೃಷ್ಟಿಯಿಂದ ನೋಡಬೇಡ. ನಿನ್ನ ತಾಯಿ ತಂದೆಗಳಂತೆ ಭಾವಿಸಿ ವರ್ತಿಸು.

ದಯಾ = ಕುರುಡ, ಕುಂಟ, ಮೂಕ ಮೊದಲಾದ ಪತಿತ ಜನಗಳಲ್ಲಿ ಅನ್ನ ವಸ್ತ್ರ ಧನಾದಿಕವನ್ನು ಕೊಟ್ಟು ದಯದಿಂದ ವರ್ತಿಸು.

ಕ್ಷಮಾ = ಪರರು ನಿನ್ನಲ್ಲಿ ಮಾಡಿದ ಸಾಮಾನ್ಯ ಅಪರಾಧಕ್ಕೆ ಕ್ಷಮಿಸು.

ದಾನ = ನಿನ್ನ ಸಂಗ್ರಹಿತ ಭೋಗ ಪದಾರ್ಥಗಳು ತಾಯಿ, ತಂದೆ, ಗುರು, ಅತಿಥಿ, ದೇವ ಮೊದಲಾದ ಪೂಜ್ಯರಲ್ಲಿ. ಸತ್-ಕರ್ಮಗಳಲ್ಲಿ ಉಪಯೋಗಿಸು.

ಪೂಜಾ = ತಾಯಿ, ತಂದೆ, ಗುರು ಮೊದಲಾದ ಪೂಜ್ಯರಲ್ಲಿ, ವಿನಮ್ರ-ಭಾವದಿಂದ ವರ್ತಿಸು, ಪ್ರೇಮಿಸು, ಸೇವಿಸು ನಿನಗಿಷ್ಟವಾದ ಯಾವ ದೇವತಾ ಮೂರ್ತಿಯನ್ನಾದರೂ ಪೂಜಿಸು.

ಜಪ = ತಾಯಿ, ತಂದೆ, ಗುರು ಮೊದಲಾದ ಪೂಜ್ಯರಲ್ಲಿ ಆದರ-ಭಾವದ ಪ್ರಿಯ ವಚನಗಳಿಂದ ಸಂಭಾಷಿಸು, ಸ್ತುತಿಸು, ಕೀರ್ತಿಸು ಮತ್ತೆ ನಿನಿಗಿಷ್ಟವಾದ ಈಶ್ವರ ತತ್ವ ದರ್ಶಕ ನಾಮವಾದ ಯಾವ ಮಂತ್ರವನ್ನಾದರೂ ಸದಾ ಜಪಿಸು.

ಧ್ಯಾನ = ಆರು ನಾನೆಂದು ವಿಚಾರಿಸು. ಆತ್ಮ ತತ್ವದ ಅನುಸಂಧಾನ ಸದಾ ಮಾಡುತ್ತಿರು.

ಶ್ರೀ. ಷ. ಬ್ರ. ರಾಜಕೋಟೆ ಶಿವಾಚಾರ್ಯರು ಚರಪಟ್ಟಾಧಿಪತಿ
ಹಿರೇಮಠ, ಮೆಹಕರ. ಜಿಲ್ಲಾ ಬೀದರ.